# ನಾಡಕವಿ ವೇಮಣ್ಣ

## ಪದ್ಯ ಕಾವ್ಯ

### (ಕನ್ನಡ ಅನುವಾದ)



ಕಾವ್ಯಕರ್ತ



ಈ ಕಾವ್ಯ ಶ್ರೀ ತಿರುಮಲ ತಿರುಪತಿ ದೇವಸ್ಥಾನ
ಆರ್ಥಿಕ ಸಹಾಯದಿಂದ ಮುದ್ರಿತವಾಗಿದೆ

ಮಾತೃದೇವೋ ಭವ

ಪಿತೃದೇವೋ ಭವ

ಕೃತಿ ಸಮರ್ಪಣೆ





N.A. ಲಿಂಗಾಂಬೆ ಚಿಪ್ಪಗಿರಿ ಮಂಡಲ N.P. ವೀರನಗೌಡರು, Ex.V.M.

ಜನುಮದಾತರಾದ ಜನನೀ ಜನಕರಿಗೆ

ಭಕ್ತಿ ಪಾರವಶ್ಯ ಭರಿತನಾಗಿ

ಕನ್ನಡಾನುವಾದ ಕಾವ್ಯ ಕುಸುಮವನ್ನು

ಅರ್ಪಿಸುವೆನು ನಮಿಸಿ ಹರುಷತುಂಬಿ

ಭೂಮಿಯನ್ನು ಹಾರೆ, ಪಿಕಾಸು ಮೊದಲಾದ ಉಪಕರಣಗಳಿಂದ ಅಗೆದು, ಬಗೆದು ನೋಯಿಸುತ್ತೇವೆ. ಆದರೆ ತೋಡಿಕೊಂಡು ಕೆಳಗೆ ಹೋದಂತೆಲ್ಲಾ ಆ ಭೂಮಿತಾಯಿ ತೋಡುವ ತನಗೆ ಹಿಂಸೆ ಕೊಡುವವರಿಗೆ ಆಶ್ರಯ ಕೊಟ್ಟುಕೊಂಡೇ ಹೋಗುತ್ತಾಳೆ. ನನ್ನನ್ನು ನೋಯಿಸುತ್ತಾರೆ ಇವರನ್ನು ಕೈಬಿಟ್ಟುಬಿಡಬೇಕು; ಪಾತಾಳಕ್ಕೆ ಬಿದ್ದು ಸಾಯುವಂತೆ ಮಾಡಬೇಕು ಎಂಬ ಭಾವನೆ ಆ ತಾಯಿಗೆ ಬರುವುದೇ ಇಲ್ಲ. (ಆದ್ದರಿಂದಲೇ 'ಕ್ಷಮಯಾ ಧರಿತ್ರಿ' ಎನ್ನುವುದು). ಹಾಗೆ ಆ ಭೂಮಿ ತಾಯಿಯಂತೆ ತಮಗೆ ಹಿಂಸೆ ಕೊಡುತ್ತಿರುವವರನ್ನು ಕ್ಷಮಿಸುವುದು ಶ್ರೇಷ್ಠ.

ಇದೇ ಅರ್ಥ ಬರುವಂತೆ ವೇಮಣ್ಣ ತನ್ನ ಆಟವೆಲದಿಯಲ್ಲಿ ಹೇಳುತ್ತಾನೆ :

ಖಳರು ಬೈವರೆಂದು ಕಳವಳಿಸುವದೇಕೆ ?
ಅವರ ನಿಂದೆಯಿಂದ ಖ್ಯಾತಿ ಕೆಡದು
ಸಜ್ಜನನ ಕಿಡಿನುಡಿ ಶಾಪವಾಗುವದುಂಟು
ವಿಶ್ವದಾಭಿರಾಮ ವೇಮ ತಿಳಿಯೊ (247) ಎಂದಿದ್ದಾನೆ.

ಸರ್ವಜ್ಞ ತನ್ನ ತ್ರಿಪದಿಯಲ್ಲಿ -

ಕೋಡಗ ತಾನೊಂದನೇಡಿಸುವುದೇ ಸಹಜ
ಮೂಢಾತ್ಮನೇನ ನುಡಿದರೂ - ಜ್ಞಾನಿ ಮಾ
ತಾಡದೇ ಹೋಹ ಸರ್ವಜ್ಞ.

ಎಂದು ಸಾರಿದ್ದಾನೆ. ಇಂಥವು ಹತ್ತಾರು ನೂರಾರು ಸಾವಿರಾರು. ಈ ಆಶು ಕವಿಗಳ ಅದ್ಭುತ ಪ್ರತಿಭಾಶಕ್ತಿಗೆ ಸಾಕ್ಷಿಯಾಗಿ ನಿಂತಿವೆ.

ಪ್ರಸ್ತುತ ಗಡಿನಾಡ ಕನ್ನಡಿಗರಾದ ಶಿವಕವಿ ಶ್ರೀ ಎನ್. ಶಿವಗೌಡರವರು ಆಂಧ್ರದ ಅತ್ಯಂತ ಜನಪ್ರಿಯ ಕವಿ ವೇಮನನ ಸಹಸ್ರಾರು ಪದ್ಯಗಳಲ್ಲಿ ಕೇವಲ ಆರು

ಅಪ್ರಮೇಯ. ಇವರ ನಾಡಿ ನಾಡಿಯಲ್ಲೂ ಕನ್ನಡತನ ಮಿಡಿಯುತ್ತಿರುವುದಕ್ಕೆ ಇವರಿತ್ತ ಈ ಕನ್ನಡಾನುವಾದ ಕೃತಿಯೇ ಸಾಕ್ಷಿ.

ಶ್ರೀಯುತರು ಇನ್ನೂ ಹಲವು ತೆಲುಗಿನ ಉದ್ದ ಕೃತಿಗಳನ್ನು ಕನ್ನಡಕ್ಕೆ ಕೊಡಲಿ; ಅದೇ ರೀತಿ ಕನ್ನಡ ಒಳ್ಳೊಳ್ಳೆಯ ಗ್ರಂಥಗಳನ್ನು ತೆಲುಗಿಗೆ ನೀಡಲಿ ತನ್ಮೂಲಕ ಆಂಧ್ರ ಕರ್ನಾಟಕಗಳ ಸಾಹಿತ್ಯಿಕ ಸಾಂಸ್ಕೃತಿಕ ಬಾಂಧವ್ಯಕ್ಕೆ ತಾವು ಕಾರಣರಾಗಲಿ ಎಂದು ಹಾರೈಸುತ್ತೇನೆ.

ಸಾ. ಶಿ. ಮರುಳಯ್ಯ
ಅಧ್ಯಕ್ಷ, ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು.

'ರಾಗಿಣಿ'
ಧಾತೃ ಭಾದ್ರಪದ ತೃತೀಯ

ಈ ಜಗತ್ತಿನಲ್ಲಿ ಹುಟ್ಟಿದ ಪ್ರತಿಮನುಷ್ಯನೂ ಸಮಾಜದ ಜೊತೆಯಲ್ಲಿ ಬಾಳುವುದು ಅನಿವಾರ್ಯ. ಅರಣ್ಯಕ್ಕೆ ನಡೆಯುವವನಿಗೂ ಸಂಘವೇ ಕಾರಣವಾಗಬಹುದು. ಅರಣ್ಯದಲ್ಲಿಯೂ ಪ್ರತ್ಯೇಕ ಗುಣಗಳುಳ್ಳ ಸಮಾಜವಿದ್ದೇ ಇರುತ್ತದೆ. ಲೋಕದಲ್ಲಿ ಬಾಳುವಾಗ ಇವನು ಅದರಿಂದ ನೋವುನಲಿವುಗಳನ್ನು ತಪ್ಪದೆ ಅನುಭವಿಸುತ್ತಾನೆ, ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾನೆ. ಇಂತಹವರಲ್ಲಿ ಕೆಲವರು ಇನ್ನು ಎರಡು ಹೆಜ್ಜೆಮುಂದಕ್ಕೆ ನಡೆದು ಲೋಕವನ್ನು ತಮ್ಮ ಉಜ್ವಲವಾದವಾಣಿಯಿಂದ ಸುಧಾರಿಸುವ ಪ್ರಯತ್ನ ಮಾಡುತ್ತಾರೆ. ಲೋಕದಲ್ಲಿ ಗುಣವಂತರೂ ಗುಣಹೀನರೂ ಸಹ ಇರುತ್ತಾರೆ. ಕವಿವರನ ಮಹೋನ್ನತವಾಣಿ ಆ ಇಬ್ಬರಲ್ಲಿರುವ ಗುಣವಂತಿಕೆಯನ್ನು, ಗುಣಹೀನತೆಯನ್ನು ಸ್ಪಷ್ಟಪಡಿಸುವುದರಮೂಲಕ ಲೋಕವ್ಯಕ್ತಿಗೆ ಅವನುನಡೆಯಬೇಕಾದ ಒಳ್ಳೆಯ ದಾರಿಯನ್ನು ತೋರಿಸಿಕೊಡುತ್ತದೆ. ಕವಿಯಹೃದಯಲ್ಲಿ ಇದಕ್ಕಾಗಿ ಅಪಾರವಾದ ಅನುಭವಭಂಡಾರವಿರಬೇಕು. ಇಲ್ಲಿ ಬಹಿರಂಗ ಎಲ್ಲರಿಗೂ ಕಂಡದ್ದೇ. ಆದರೆ ಎಲ್ಲರ ವಿಷಯದಲ್ಲಿ ಆ ಬಹಿರಂಗ-ದೃಶ್ಯವಾದ ಕ್ಷಣದಲ್ಲೇ ಸಾಯುತ್ತದೆ. ಆದರೆ ಮಹಾಕವಿಗಳವಿಷಯದಲ್ಲಿ ಹಾಗಾಗುವದಿಲ್ಲ. ಆ ಬಹಿರಂಗ ಅವನಅಂತರಂಗ ಪಾಕಶಾಲೆಯಲ್ಲಿ ರಸೌಷಧವಾಗಿಯೂ, ರಸದೂಟವಾಗಿಯೂ ಪರಿಣಾಮ ಹೊಂದುತ್ತದೆ. ಅವನವಾಣಿ ಲೋಕಕ್ಕೆ ದಾರಿ ದೀವಿಗೆಯಾಗುತ್ತದೆ. ಮಹೋನ್ನತಾದರ್ಶ ಮೂರ್ತಿಮತ್ವ ಅಪಾರಾನುಭವದ ಪಾಕಸಿದ್ಧಿ, ಪ್ರತಿಭೆ, ಲೋಕದ ಬಗ್ಗೆ ಕಳ ಕಳಿ, ನಿಷ್ಠೆ ಇರುವಕೆಲವರೇ ಈಕೆಲಸಕ್ಕೆ ಕೈಹಾಕಿ ಯಶಸ್ವಿಗಳಾಗಬಲ್ಲರು. ಅಂತವರಲ್ಲಿ ಶ್ರೇಷ್ಠರು, ತೆಲುಗಿನ ವೇಮನ ಮತ್ತು ಕನ್ನಡದ ಸರ್ವಜ್ಞ.

ಈ ಕವಿಗಳ ಅಪಾರವಾದ ಜೀವನಾನುಭವದ ಹಿಮವತ್ಪರ್ವತದಿಂದ ಹರಿದು ಬಂದ ವಾಗ್ಗಂಗೆ ಎಲ್ಲಾ ಜನರ ಹೃದಯಕ್ಷೇತ್ರಗಳಲ್ಲಿ ಉತ್ತಮಭಾವನಾ ಫಲಗಳನ್ನು ಬೆಳೆಸಲು ಸಮರ್ಥವಾಗುತ್ತದೆ. ಪ್ರಪಂಚದಲ್ಲಿ ಇಂತಹ ದಿವ್ಯ ಚೈತನ್ಯಗಳು ಆಗಾಗ್ಗೆ ಬೆಳಗುತ್ತಾ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತವೆ. ಆದರೆ ಈಜ್ಞಾನದಬೆಳಕು ಅವರು ಹುಟ್ಟಿದ ನಾಡುನುಡಿಗಳಲ್ಲಿ ಮಾತ್ರವೆ ಉಳಿಯದೆ ಇಡೀ ಮನುಷ್ಯ ಜಾತಿಗೆ ದಾರಿತೋರಬೇಕಾಗಿದೆ. [illegible]

ಭಾರ. ಮೂಲ ಕರ್ತೃವಿನ ಮನೋಜ್ಞ ಭಾವನೆಗಳನ್ನು ಅನುವಾದಕನು ಮತ್ತೊಂದು ಭಾಷೆಯಜನರಿಗೆತಲುಪಿಸುತ್ತಾನೆ. ಆಭಾವ ಮನೋಜ್ಞತೆಗೆ ಎಳ್ಳಷ್ಟುಕುಂದು ಬರಬಾರದು. ಮೇಲಾಗಿ ಅನುವಾದವನ್ನು ಓದಿದಜನ ಅದರ ಮೂಲಕರ್ತೃವನ್ನು ಮೆಚ್ಚಿಕೊಳ್ಳುವುದಲ್ಲದೆ ಅವನಮತ್ತಿತರ ರಚನೆಗಳನ್ನು ಓದಬೇಕೆನ್ನುವ ಕುತೂಹಲವನ್ನು ಪಡೆಯಬೇಕು. ಆಗ ಅದು ಮೇಲ್ಮಟ್ಟದ ಅನುವಾದವಾಗುತ್ತದೆ. ಇಂತಹ ದೊಡ್ಡ ಹೊಣೆಯನ್ನು ಹೊತ್ತ ಅನುವಾದಕನ ಕೆಲಸ ಬಹಳ ಜಾಗರೂಕತೆಯಿಂದ ಮಾಡಬೇಕಾದದ್ದು. ಅಷ್ಟೇಅಲ್ಲದೆ ಅನುವಾದಕನಿಗೆ ಮೂಲಭಾಷೆಯ ಮತ್ತು ಅನುವಾದಭಾಷೆಯ ಜಾಯಮಾನದ, ಜೀವನಾದಗಳ ತಿರುಳಿನಅರಿವು ಅತ್ಯವಶ್ಯ. ಕೆಲವೊಮ್ಮೆ ಅನುವಾದ ಮೂಲಕ್ಕೆ ವ್ಯಾಖ್ಯಾನದಂತಿದ್ದರೂತಪ್ಪಿಲ್ಲ. ಆದರೇ ಸ್ವಕಪೋಲ ಕಲ್ಪಿತವಿಷಯಗಳನ್ನು ಮೂಲಕರ್ತೃವಿನ ತಲೆಗೆಕಟ್ಟುವುದು ಅಂಗೀಕಾರವಲ್ಲ. ಸಾಮಾನ್ಯ ದೃಷ್ಟಿಯಿಂದ ಕನ್ನಡದ ಪಂಪ, ಕುಮಾರವ್ಯಾಸ, ತೆಲುಗಿನ ನನ್ನಯ ತಿಕ್ಕನ ಎಜ್ಞಾಪ್ರಗಡ, ತಮಿಳಿನ ವಿಲ್ಲಿಪುತ್ತೂರ್ ಇತ್ಯಾದಿ ಕವಿಗಳ ರಚನೆಗಳನ್ನು ಅನುವಾದಗಳನ್ನುವುದುಂಟು. ಆದರೆ ಇವು ಅನುವಾದವೆನ್ನುವ ಪದಕ್ಕೆ ಈಗ ರೂಢಿಯಲ್ಲಿರುವಅರ್ಥಕ್ಕೆ ಹೊಂದಿಕೊಳ್ಳುವುದಿಲ್ಲ. ಇವುಸ್ವತಂತ್ರ ರಚನೆಗಳಂತೆಯೇ ಮನ್ನಣೆ ಪಡೆದಿವೆ. ಮೂಲಕಥಾವಸ್ತು ಉಪಾಖ್ಯಾನಗಳು ಧಾರ್ಮಿಕ ಪ್ರಸಂಗಗಳು ಇತ್ಯಾದಿಬಹುಅಂಶಗಳಲ್ಲಿ ವ್ಯಾಸನಿಗೆ ಅತ್ಯಂತನಿಕಟವಾಗಿ ನಡೆದವರೆಂದರೆ, ತೆಲುಗಿನ ಕವಿತ್ರಯವೆಂದು ಹೆಸರಾಂತ ನನ್ನಯ, ತಿಕ್ಕನ, ಎಜ್ಞನ ಕವಿಗಳೇ ಎಂಬುದರಲ್ಲಿ ಸಂಶಯವಿಲ್ಲ. ತೆಲುಗುನಲ್ಲಿ ಬಂಡಾಯಕವಿ ಎನ್ನಲು ಅರ್ಹನಾದ ವೇಮನನ ನುಡಿಮುತ್ತುಹಾರಗಳು ಪ್ರಪಂಚದ ಎಲ್ಲಾ ದೇಶಗಳ ಜನರೆಲ್ಲರೂ ತಮ್ಮ, ಗಳಸೀಮೆಯಲ್ಲಿ ಧರಿಸತಕ್ಕವು. ತೆಲುಗಿನವರಿಗೆ ಸಾಹಿತ್ಯ ಮತ್ತು ಭಾಷಾ ಸಂಬಂಧವಾದಸಂಪತ್ತನ್ನು ಉಳಿಸಿಕೊಟ್ಟ ಮಹೋನ್ನತವ್ಯಕ್ತಿ ಪ್ರಾತಃಸ್ಮರಣೀಯರಾದ ಬ್ರೌನ್ ಪಂಡಿತರ ಕೃಷಿ ಫಲಿತವಾಗಿ ಈಗಾಗಲೇ ವೇಮನನ ನುಡಿ ಭಾರತದ ಗಡಿ ದಾಟಿದೆ. ಹೀಗಿರುವಾಗ ತೆಲುಗಿನ ಅಕ್ಕಪಕ್ಕದ ಭಾಷೆಗಳಲ್ಲಿಯೇ ಆಕವಿಯವಾಗ್ಗಂಗೆ

ಕೆಲವು ಕೃತಿಗಳನ್ನು ತೆಲುಗಿನಲ್ಲಿ ರಚಿಸಿ ತಮ್ಮ ಪ್ರತಿಭೆಯ ಬೆಳಕನ್ನು ಚೆಲ್ಲಿದ್ದಾರೆ. ಈಗ ತೆಲುಗಿನ ವೇಮನನನ್ನು ಕನ್ನಡಿಗರಿಗೆ ಅರ್ಥವಾಗುವ ರೀತಿಯಲ್ಲಿ ಪರಿಚಯಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾರೆ.

ಅನುವಾದವನ್ನು ಮೂಲದ ಜೊತೆಯಲ್ಲಿ ಹೋಲಿಸಿನೋಡಿದಾಗ ಬಹುಮುಖವಾದ ಸಹಜವಾದ ಇವರಪ್ರತಿಭೆ ಎದ್ದುಕಾಣುತ್ತದೆ. ಇವರಕೆಲವು ಅನುವಾದ ಪದ್ಯಗಳು ವೇಮನನೇ ಕನ್ನಡದಲ್ಲಿ ಬರೆದನೆಂಬಂತೆ ತೋರುತ್ತವೆ. ನೋಡಿ-

"ಮಾಟಲಾಡು ಟೊಕಟಿ ಮನಸುಲೋ ನೊಕ್ಕಟಿ
ಒಡಲಿ ಗುಣಮದೊಕಟಿ ನಡತ ಯೊಕಟಿ
ಎಟ್ಲುಗಲ್ಗು ಮುಕ್ತಿ ಯಿಟ್ಟುಲುಂಡಗತಾನು
ವಿಶ್ವದಾಭಿರಾಮ ವಿನುರ ವೇಮ" (189) ಎಂಬ ಪದ್ಯಕ್ಕೆ (ಅನುವಾದ)

"ಮಾತಿನಲ್ಲಿಒಂದು ಮನದಲ್ಲಿಮತ್ತೊಂದು
ಒಡಲಿನ ಗುಣಬೇರೆ ನಡತೆಬೇರೆ
ಎಂತು ಮುಕ್ತನಪ್ಪ ಇಂತು ತಾನಿದ್ದೊಡೆ
ವಿಶ್ವದಾಭಿರಾಮ ವೇಮ ತಿಳಿಯೊ" ಎನ್ನುವ ಅನುವಾದ ಅತ್ಯಂತ ಹೃದ್ಯವಾಗಿದೆ, ಮೂಲಾನುಸಾರವಾಗಿದೆ.

ಮೂಲಕ್ಕೆ ಅಚ್ಚು ಪ್ರತಿಬಿಂಬಗಳಂತೆ ತೋರುವ ಅನುವಾದದ ಪದ್ಯಭಾಗಗಳನ್ನು ನೋಡಿ

"ಕಮಲಮಂದು ಜೇರಿ ಕಪ್ಪ ಕೂಚುನ್ನಟ್ಲು" (ವೇಮನ)
"ಕಮಲವನ್ನುಸೇರಿ ಕಪ್ಪೆ ಕೂತಿರುವಂತೆ" ॥ (ಗೌಡರು)
"ಪುರುಷುಲಂದು ಪುಣ್ಯ ಪುರುಷುಲು ವೇರಯಾ " (ವೇಮನ)
"ಪುರುಷರಲ್ಲಿ ಪುಣ್ಯ ಪುರುಷರು ಬೇರಯ್ಯ" (ಗೌಡರು)

ಚಿತ್ತಶುದ್ಧಿಲೇನಿ ಶಿವಪೂಜಲೇಲರಾ । ವಿಶ್ವದಾಭಿರಾಮವಿನುರವೇಮ ।

(ವೇಮನ)

"ಆತ್ಮ ಶುದ್ಧವಿರದ ಆಚಾರವದು ಏಕೆ । ಗಡಿಗೆ ಶುದ್ಧವಿರದ ಅಡಿಗೆ ಏಕೆ

ಚಿತ್ತಶುದ್ಧವಿರದ ಶಿವನಪೂಜಗಳೇಕೆ । ವಿಶ್ವದಾಭಿರಾಮ ವೇಮ ತಿಳಿಯೊ ।

(ಶಿ. ಗೌಡರು)

ಇಲ್ಲಿ ಎರಡನೇಯ ಪಾದದಲ್ಲಿ "ಗಡಿಗೆ , ಅಡಿಗೆ", ಎನ್ನುವಪ್ರಾಸ ಶ್ರವಣಪೇಯವಾಗಿದ್ದು ಭಾವಕ್ಕೆ ಮತ್ತಷ್ಟು ಬಲವನ್ನು ತಂದಿದೆ.

ಇತ್ಯಾದಿ ಅನುವಾದಗಳು ಮೂಲದಂತೆಯೇ ಸುಪ್ರಸಿದ್ಧಿಯನ್ನು ಪಡೆದು ಜನರ ನಾಲಿಗೆ ಮೇಲೆ ನಲಿದಾಡಲು ಸಮರ್ಥವಾಗಿವೆ. 132ನೆ ಪದ್ಯದ ಅನುವಾದದಲ್ಲಿ ವೇಮನನಲ್ಲಿ ಸಹಜ ಯತಿ ಅಂತ್ಯಾನುಪ್ರಾಸಗಳಿದ್ದರೆ - ಗೌಡರ ಅನುವಾದದಲ್ಲಿ ಸಹಜಯತಿಯ ಜೊತೆಗೆ ಮೂರು ಸಕಾರಗಳು, ಮೂರು ನಕಾರಗಳು ಜೊತಗೆ ಅನುಸ್ವಾರವೂ ಸೇರಿ ನಾದಸೌಭಾಗ್ಯವನ್ನು ಒಡಗೂಡಿಸಿದೆ.

ಬಹಳಷ್ಟು ಕಡೆಗಳಲ್ಲಿ ಮೂರನೇಯ ಪಾದದ ಅನುವಾದಗಳು ಮೂಲಕ್ಕೆ ನೆರಳುಗಳಂತೆ ನಡೆದು ಬಂದಿರುವುದು ಒಂದು ವಿಶೇಷ. ವೇಮನನ ಆಟವೆಲದಿಗಳಲ್ಲಿ ಮೂರನೇಯ ಪಾದವೇ ಇಡೀ ಪದ್ಯಕ್ಕೆ ಜೀವ. ಪದ್ಯದಲ್ಲಿನ ವಿಷಯ ಸಿದ್ಧಾಂತ ರೂಪದಲ್ಲಿ ಮೂರನೇಯ ಪಾದದಲ್ಲಿ ಪ್ರತ್ಯಕ್ಷವಾಗುತ್ತದೆ. ವೇಮನನ ರಚನೆಯಲ್ಲಿನ ಈ ಶಕ್ತಿಯೇ ಶಿವಗೌಡರ ಲೇಖನದಲ್ಲಿಯೂ ಪ್ರವೇಶಿಸಿದೆ ಎಂದರೆ ಅತಿಶಯೋಕ್ತಿಯಲ್ಲ. ನೋಡಿ -

"ಕೊಂಡ ಅದ್ದಮಂದು ಕೊಂಚೆ ಮ್ಯೆಯುಂಡದಾ" (ವೇಮನ) ಪದ್ಯ 235

"ಕನ್ನಡಿಯಲಿ ಬೆಟ್ಟ, ಕಾಣದೇ ಕಿರಿದಾಗಿ" (ಗೌಡರು) ಪದ್ಯ 235

"ಕಂಚು ಮೊಳಗಿದಂತೆ ಕಾಂಚನ ಮೊರೆವುದೆ" (ಗೌಡರು) ಪದ್ಯ 170

"ಪರಗರಾತಿಗುಂಡುಪಗುಲಗೊಟ್ಟಗವಚ್ಚು । ಕೊಂಡನ್ನೈನ ಪಿಂಡಿಗೊಟ್ಟವಚ್ಚು ।
ಕಠಿನಚಿತ್ತುಮನಸುಕರಗಿಂಪಗಾರಾದುವಿಶ್ವ......."(ವೇಮನ)ಪದ್ಯ178

ಸುಂದರವಾದ ಈ ಅನುವಾದವನ್ನು ನೋಡಿ

"ಗಂಡಶಿಲೆಯನೊಡೆದು ತುಂಡು ಮಾಡಬಹುದು । ಪರ್ವತಗಳ ಹಿಟ್ಟು
ಬಡಿಯಬಹುದು
ಕಠಿನ ಹೃದಯನ ಮನ ಕರಗಿಸಲಳವಲ್ಲ । ವಿಶ್ವದಾ....." (ಗೌಡರು)
ಪದ್ಯ 128

ಗಂಡಶಿಲೆ-ತುಂಡು ಮಾಡು ಎನ್ನುವಲ್ಲಿನ ಸಹಜ ಸಿದ್ಧವಾದ ಅನುಪ್ರಾಸ ಪದ್ಯದ ಬೆಡಗನ್ನು ಬೆಳೆಸಿದೆ. ವೇಮನ ಎಲ್ಲೆಲ್ಲೂ ಈ ಸಹಜ ಯತಿಪ್ರಾಸಗಳನ್ನು ಬಳಸುತ್ತಾನೆ ಎನ್ನುವುದನ್ನು ನಾವಿಲ್ಲಿ ಗಮನದಲ್ಲಿಡಬೇಕು. ಸಹಜವಾಗಿ ಬಂದ ಯತಿ, ಪ್ರಾಸಯತಿ, (ಯತಿಸ್ಥಾನದ ನಂತರದ ಪ್ರಾಸಾಕ್ಷರ) ಗಳು ಶ್ರಾವ್ಯವಾಗಿರುತ್ತವೆ. ಮೇಲ್ನೋಟಕ್ಕೆ ಇದು ಸುಲಭವೆನಿಸಬಹುದು. ಆದರೆ ಸಹಜ ಯತಿಗೆ ಬೇಕಾದ ಅಕ್ಷರಗಳಿರುವ ಪದಗಳು ಮಾತ್ರ ಅಲ್ಪಸಂಖ್ಯೆಯಲ್ಲಿಯೇ ಸಿಗುತ್ತವೆ. ಈ ದೃಷ್ಟಿಯಲ್ಲಿ ಇಂತಹ ಪ್ರಯೋಗ ಆ ಕವಿಗೆ ಭಾಷೆಯ ಮೇಲಿರುವ ಅಧಿಕಾರವನ್ನು ಪ್ರಕಟಿಸುತ್ತದೆ. ಗೌಡರು ತಮ್ಮ ಅನುವಾದದಲ್ಲಿ ಇಂತಹ ಪ್ರಯೋಗಗಳಿಂದ ಮೂಲಕವಿಯನ್ನು ಭಾವದಲ್ಲಷ್ಟೇ ಅಲ್ಲದೆ ಅದರ ಭಂಗಿಯಲ್ಲು, ಛಂದದಲ್ಲೂ ಅನುಸರಿಸಿ ಓದುಗರಿಗೆ ಮೂಲವನ್ನೇ ಓದಿದ ಅನುಭೂತಿಯನ್ನು ನೀಡಲು ಸಮರ್ಥರಾಗಿದ್ದಾರೆ -

ಪರಿಸರಕ್ಕೆಅನುಗುಣವಾಗಿ ಅನುವಾದದಲ್ಲಿ ಮಾಡಿದ ಮೂಲದ ಬದಲಾವಣೆಯೂ ಔಚಿತ್ಯ ದೃಷ್ಟಿಯಿಂದ ಪ್ರಶಂಸಾರ್ಹವೇ ಆಗುತ್ತದೆ. ಮೂಲದಲ್ಲಿ "ಕುಕ್ಕ ತೋಕಪಟ್ಟಿ ಗೋದಾವರೀದುನಾ" ಎಂಬಪಾದವನ್ನು "ನಾಯಿ ಬಾಲ ಹಿಡಿದು

"ಕಫಮುಮೀರಿ ಮರಿಯು ಕನುಲುಮೂತಲುಪಡಿ। ಬುದ್ಧಿತಪ್ಪಿ ಜಾಲ ಪುಡಮಿಮರಚು
ವೇಳಲಂದು ಶಿವುನಿ ವೆದಕುಟ ಸಾಧ್ಯಮಾ । " ವಿಶ್ವ .... (ವೇಮನ)

"ಕಫವುಹೆಚ್ಚಿ ಮತ್ತು ಕಣ್ಣುಮುಚ್ಚಿಗೆಬಿದ್ದು। ಬುದ್ಧಿಜಡತೆಯಿಂದ ಪೊಡವಿಮರೆತು ।
ಹೋಗುವಾಗ ಹರನ ಹುಡುಕಲು ಸಾಧ್ಯವೇ । ವಿಶ್ವ " ..... (ಗೌಡರು)

"ಒಡ್ಡು ಪೊಡವುಗಲ್ಗಿ ಗಡ್ಡಂಬು ಪೊಡವೈನ । ದಾನಗುಣಮು ಲೇಕ ದಾತಯಗುನೆ।
ಎನುಮುಗೊಪ್ಪದ್ಯೆನ ನೇನುಗು ಬೋಲುನಾ । ವಿಶ್ವ......" (ವೇಮನ)

"ಅಡ್ಡದಿಡ್ಡ ಬೆಳೆದು ಗಡ್ಡ ಉದ್ದಾದರು । ದಾನಗುಣವದಿರದೆದಾನಿಯಲ್ಲ ।
ಎಮ್ಮೆ ಬಲಿತರೇನು ಎಂಬರೇಗಜವೆಂದು । ವಿಶ್ವದಾಭಿ ..." (ಗೌಡರು)

ಅನುವಾದವೆನ್ನುವದು ಒಂದು ಬಗೆಯಲ್ಲಿ ಪರಕಾಯಪ್ರವೇಶವಿದ್ದಂತೆ.

ಶಿವಗೌಡರ ಪಾಕ ಹೇಗಾಗಿದೆ ಎಂಬುದಕ್ಕೆ ಒಂದೆರಡು ಅಗುಳುಗಳನ್ನು ಈ ಸೌಟಿನಿಂದ ಎತ್ತಿ ತೋರಿಸಿದ್ದೇನೆ. ಇಂತಹವು ಇಲ್ಲಿ ನೂರಾರಿವೆ. ಸರಸ ಹೃದಯರು ಅದನ್ನು ಸ್ವಯಂ ಸವಿ ನೋಡಬಹುದು —

ಶಿವಗೌಡರಿಗೆ ಅಂತರಂಗವಾವುದು? ಬಹಿರಂಗವಾವುದು? ಭೌಗೋಳಿಕ ಸ್ಥಿತಿ ಪರವಾಗಿ ಅವರ ಬಹಿರಂಗ ತೆಲುಗು, ಅಂತರಂಗ ಕನ್ನಡ. ಭಾಷಾ ಸಾಹಿತ್ಯಾಭ್ಯಾಸಗಳ ಪರವಾಗಿ ಅವರಿಗೆ ಅಂತರಂಗ ತೆಲುಗು ಬಹಿರಂಗ ಕನ್ನಡ. ನಿಜ ಹೇಳಬೇಕಂದರೆ ಈ ಊಹೆಗಳು ಸರಿಯಲ್ಲ. — ಅವರೊಬ್ಬರಿಗೆ ಮಾತ್ರವಲ್ಲದೆ ಸಾಹಿತ್ಯಕಾರರಾದ ಎಲ್ಲರಿಗೂ ಭಾವವೇ ಅಂತರಂಗ, ಭಾಷೆಯೇ ಬಹಿರಂಗ ಈ ಕಾರಣದಿಂದಲೇ ಸಾಹಿತ್ಯ ಕಾರನ ಮಾತು ಯಾವದೇಶದಲ್ಲಾದರೂ ಯಾವ ಕಾಲದಲ್ಲಾದರೂ ಹುಟ್ಟಿರಲಿ ಅದು ಸಾರ್ವದೇಶಿಕವೂ ಸಾರ್ವಕಾಲಿಕವೂ ಆಗಿ ಮೆರೆಯುತ್ತದೆ. ಈ ಅನುವಾದ ರಚನೆಯಲ್ಲಿ ತದೇಕ ದೃಷ್ಟಿಯಿಂದ ಹುಡುಕಿ ನೋಡಿದರೆ ಭಾಷಾ ವ್ಯಾಕರಣಾದಿಗಳಿಗೆ

ಅಪಾರಗುಣ ರಾಶಿಯಲ್ಲಿ ಒಂದೆರಡು ದೋಷಗಳು ಚಂದಿರನಲ್ಲಿನ ಕಲೆಯಂತೆಯೇ ಬೆಳಕಿಗೆ ಕುಂದು ತರುವುದಿಲ್ಲ ಎನ್ನುವ ಭರವಸೆ ನನಗಿದೆ. ಸರಸಹೃದಯರು ಈ ಗ್ರಂಥದಲ್ಲಿ ಗಾಢವಾದ ಪಾಂಡಿತ್ಯ ಪ್ರಕರ್ಷವನ್ನಲ್ಲದೆ ವೇಮನನ ವಾಗಮೃತವನ್ನು ಕನ್ನಡಜನತೆಯ ಹೃದಯಕ್ಕೆ ತಲುಪಿಸುವಪ್ರಯತ್ನದಲ್ಲಿ ಶ್ರೀ ಶಿವಗೌಡರಿಗಿರುವ ಪ್ರಗಾಢ ನಿಷ್ಠೆಯನ್ನು ಅರಿತು ಹೌದೆಂದರೆ ಶ್ರೀ ಗೌಡರ ಪ್ರಯತ್ನ ಸಾರ್ಥಕವಾದೀತು.

ಹೊರನಾಡಿನ ಕನ್ನಡಿಗರಾಗಿ ಶಿವಗೌಡರು ಕನ್ನಡಸಾಹಿತ್ಯಕ್ಕೆ ನಡೆಸಿಕೊಟ್ಟ ಈ--ಸೇವೆ ಮೆಚ್ಚತಕ್ಕದ್ದು. ಓಟಿನತುಫಾಕಿ ಕೈಯಲ್ಲಿ ಹಿಡಿದುಕೊಂಡು ನಮಗೆಬೇಕಾದ ಸೌಲತ್ತನ್ನುಕೊಡಿ ಇಲ್ಲವೇ ನಾವುಬೇರೆರಾಜ್ಯದಲ್ಲಿ ಸೇರಿಕೊಳ್ಳುತ್ತೇವೆ ಎಂದು ಸರಕಾರಕ್ಕೆ ಬೆದರಿಕೆ ಹಾಕುವುದೋ, ವಿದ್ಯಾಸಂಸ್ಥೆಗಳಲ್ಲಿ ಸೀಟುಗಳು, ಹುದ್ದೆಗಳು ಲಭಿಸುತ್ತವೆಂಬ ಒಂದೇ ಉದ್ದೇಶಕ್ಕಾಗಿ; ಹೊರನಾಡಿನ ಕನ್ನಡಿಗರೆಂದು ಹೇಳಿಕೊಳ್ಳುತ್ತಾ ಕರ್ನಾಟಕದತ್ತ ಕೈಚಾಚಿ ನಿಂತವರು ಮಾತ್ರವೇಇಂದು ಚಲಾವಣೆ ಹೊಂದಿದ್ದು — ನಿಜವಾದ ಸಾಹಿತ್ಯ ಸೇವಕರು ಮೂಲೆ ಗುಂಪಾಗಿರುವುದು ನೋವಿನ ಸಂಗತಿ. ಕನ್ನಡದ ಅಭಿವೃದ್ಧಿಯ ಬಗ್ಗೆ ನಿಷ್ಠೆಯಿದ್ದ ಪಕ್ಷದಲ್ಲಿ ಸರಕಾರದವರು ಶಿವಗೌಡರಂತಹ ಸಾಹಿತ್ಯ ಸೇವಕರಿಗೆ ಪ್ರೋತ್ಸಾಹ ನೀಡಬೇಕು —

ಆದೇಕೋ ಅಕಾಡಮೀಗಳ, ಪರಿಷತ್ತುಗಳ ಮುಖಂಡರ ದೃಷ್ಟಿ ವಿಶ್ವವಿದ್ಯಾಲಯಗಳ ಮಟ್ಟದಿಂದ ಇಳಿದುಬರುವುದೇಇಲ್ಲ. ಅವರು ದೊಡ್ಡ ಮನಸ್ಸು ಮಾಡಿ ಸ್ವಲ್ಪತಲೆತಗ್ಗಿಸಿ ಕಣ್ಣಾಡಿಸಿದರೆ, ಅನುವಾದ ಮುಂತಾದ ಕಾರ್ಯಗಳಿಗೆ ಗೌಡರಂತವರು ಸಾಮಾನ್ಯ ಜನರಲ್ಲಿಯೂ ಕಾಣಿಸುತ್ತಾರೆ. ಅವರೆಲ್ಲರೂ ಕನ್ನಡಕ್ಕಾಗಿ ನಿಸ್ವಾರ್ಥ ಮನೋಭಾವನೆಯಿಂದ ದುಡಿಯಲು ಸಜ್ಜಾಗಿನಿಂತಿದ್ದಾರೆ. ಇವರಸೇವೆಯಿಂದ ಕನ್ನಡಸಾಹಿತ್ಯಕ್ಷೇತ್ರ ಮತ್ತಷ್ಟು ಸಾರವತ್ತಾಗಬಲ್ಲದು ಎಂಬುದರಲ್ಲಿ ಏನು ಸಂದೇಹ? ಅಂತಹ ಒಳ್ಳೆಯಕಾಲ ಬರಲಿಯೆಂದೂ, ಈ ಬಹಿರಂಗ ರಹಸ್ಯ ದೊಡ್ಡವರ ಅಂತರಂಗಕ್ಕೆ

ಕವಿಯಾದವನೇ ಕವಿಹೃದಯವನ್ನು ತಿಳಿಯಬಲ್ಲ. ಹಾಗೆ ಸ್ವತಃ ಕವಿತಾ ಸಾಮರ್ಥ್ಯವಿರುವ ಶ್ರೀ ಶಿವಗೌಡರು ತೆಲುಗು ಕವಿ ವೇಮನಗಂಗೆಯನ್ನು ಕನ್ನಡಕ್ಕೆ ಇಳಿಸಿ ತರುವ ಭಗೀರಥ ಪ್ರಯತ್ನ ಮಾಡಿ ಬಹುಮಟ್ಟಿಗೆ ಸಫಲರಾಗಿದ್ದಾರೆ. ಇನ್ನು ಇಂದಿನ ಟಿ.ವಿ. ವಾತಾವರಣದಲ್ಲಿ ಕಾವ್ಯ ಪ್ರಕಟನೆ ಸಾಹಸಕಾರ್ಯವೇ ಸರಿ. ಬಸವಣ್ಣನವರು ದೇವ-ಭಕ್ತನ ಸಂಬಂಧವನ್ನು ಕುರಿತು ಹೇಳುವ "ಕಾಣಿಯಸೋಲ; ಅದ್ದಗಾಣಿಯ ಗೆಲ್ಲ" ಅಂದರೆ ಕಾಸಿನ ನಷ್ಟ; ಅರ್ಧಕಾಸಿನ ಲಾಭವೆಂಬ ವಚನ ನೆನಪಿಗೆ ಬರುತ್ತದೆ. ಭಕ್ತನ ಅಲ್ಪವಾದ ಭಕ್ತಿಗೂ ಒಲಿಯುವ ಮಹಾದೇವ ಕೊಡುವುದು ಮಾತ್ರ ಅಪಾರ. ಈ ಸಾಹಿತ್ಯ ವ್ಯಾಪಾರದಲ್ಲೂ ಲಾಭಕ್ಕಿಂತ ನಷ್ಟವೇ ಹೆಚ್ಚು. ಆದರೂ ಕವಿ ಪರಾರ್ಥದಂತೆ, ಸ್ವಾಂತ ಸುಖ (ತನ್ನ ಮನದ ಆನಂದಕ್ಕೆ) ಕ್ಕೂ ಸಾಹಿತ್ಯ ವ್ಯಾಪಾರದಲ್ಲಿ ತೊಡಗುತ್ತಾನೆ. ಇಲ್ಲಿ ಶ್ರೀ ಶಿವಗೌಡರು ಪರಿಶ್ರಮಪಟ್ಟು ಕಲಿತ ತೆಲುಗು ಜೇನನ್ನು ತನ್ನ ಮಾತೃಭಾಷೆಯಾದ ಕನ್ನಡಕ್ಕೂ ಹರಿಸಿ ಇತರರೊಡನೆ ತನ್ನ ಆನಂದವನ್ನು ಹಂಚಿಕೊಂಡಿದ್ದಾರೆ. ಇದರಂತೆ ಇವರು ಸರ್ವಜ್ಞ ವಚನದ ಕನ್ನಡ ಕಸ್ತೂರಿಯನ್ನು ತೆಲುಗಿಗೂ ಅನುವಾದಿಸಿದ್ದು ಬೇಗನೇ ಪ್ರಕಟವಾಗಲಿ ಎಂದು ಹಾರೈಸುವ

15.3.97

ಇಂತಿ ಕನ್ನಡ ಕಿಂಕರ

**ಜಿ.ಎಸ್. ಭಟ್ಟ**
ಕನ್ನಡ ಉಪನ್ಯಾಸಕ
ಆದವಾನಿ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು
ಆದವಾನಿ.

# ನನ್ನ ಮಾತು

ಆಂಧ್ರ ವಾಙ್ಮಯಾಗಸದಲ್ಲಿ ಮೆರೆಯುತ್ತಿರುವ ಅಪೂರ್ವ ಧ್ರುವತಾರೆ ನಾಡಕವಿ ವೇಮಣ್ಣ. ಆ ತಾರೆ ಹೊರಚಿಮ್ಮುವ ಹೊಳಪಿನ ಬೆಳಕು ಆಂಧ್ರಭಾಷೆಯಿರುವಷ್ಟು ದಿನ ಬೆಳೆದು ಬೆಳಗುತ್ತಲೇ ಇರುತ್ತದೆ.

ಆಂಧ್ರ ದೇಶದಲ್ಲಿ ಪಂಡಿತರು, ವಿಮರ್ಶಕರು, ವೇದಾಂತಿಗಳು, ಕವಿಗಳು, ಯೋಗಿಗಳು, ಅನೇಕರು ಜನಿಸಿದ್ದಾರೆ. 1. ವಿಮರ್ಶನಾ ಶಕ್ತಿ 2. ಅಪಾರ ಪಾಂಡಿತ್ಯ 3. ಅತಿಶಯ ಕವಿತಾಧಾರೆ, ಈ ಮೂರು ಗುಣಗಳಿಂದ ಶೋಭಿಸುವ ಮಹನೀಯರು ಇದ್ದಾರೆ. ಆದರೆ ಕವಿಯಾಗಿ, ಯೋಗಿಯಾಗಿ, ಜಗತ್ಪ್ರಸಿದ್ಧರಾದ ಪುಣ್ಯಾತ್ಮರು ಜನಿಸುವುದೇ ಅಪೂರ್ವ. ಆ ಚರಿತಾರ್ಥರ ಗುಂಪಿಗೆ ಸೇರಿದವನೇ ಆಂಧ್ರ ನಾಡಕವಿಯಾದ ಯೋಗಿಕವಿ ವೇಮಣ್ಣ.

ಈ ಕವಿ ಪೂರ್ವಾಶ್ರಮದಲ್ಲಿ ರಸಿಕನಾಗಿ, ಸಂಸಾರಿಕ ಜೀವನ ಬಂಧನದಲ್ಲಿ ಸಿಕ್ಕಿ ಅತ್ತಿಗೆಯ ಆದೇಶದಿಂದ ಮತ್ತು ಸದ್ಗುರು ಕೃಪೆಯಿಂದ ಬಂಧಮುಕ್ತನಾಗಿ ತತ್ತ್ವದರ್ಶನ ಹೊಂದಿ ತಪಸ್ವಿಯಾಗಿ ಯೋಗಿಯಾಗಿ ಮಹೋನ್ನತ ಕವಿಯಾದ. ಈ ಯೋಗಿಕವಿ ...ರ್ವಸಂಗ ಪರಿತ್ಯಾಗಿಯಾಗಿ ದೇಹದ ಮೋಹವಳಿಸಿ ದಿಗಂಬರನಾಗಿ ತಿರುಗುತ್ತಿದ್ದನೆಂದು ...ತ್ತಾರೆ.

ಸರ್ವಜ್ಞನಾಡಿನಲ್ಲಿ ಹೆಸರುವಾಸಿಯಾದ ತ್ರಿಪದಿಕವಿ, ಪರಿವ್ರಾಜಕ ಸನ್ಯಾಸಿಯಾದ ನುಡಿಕಟ್ಟಿನ...ಕವಿಯಂತಿಯೇ ಈ ಯೋಗಿಕವಿ ವೇಮಣ್ಣ ಜನರಾಡುವ ಸುಲಭ ಪ್ರಾಪಂಚಿಕ ವ್ಯವ...ಕವಿತಾ ಗೀತೆಗಳನ್ನು ಹಾಡಿ, ಜನರಿಗೆ ನೀತಿ ಮಾರ್ಗ ಬೋಧಿಸಿದ್ದ. ನೇರವಾಗಿ ಹಾಸ್ಯ ...ಲ್ಲಿ ಸೂಕ್ಷ್ಮದೃಷ್ಟಿ, ಬುದ್ಧಿ ಕುಶಲತೆ, ಜನತೆಗೆ ಹೇಳಬೇಕಾದ್ದು, ನುಡಿಯುವ ಗುಣ, ಇವೇ ...ಳನದಿಂದ ಹೇಳುವ ಶಕ್ತಿ ಯುಕ್ತಿಗಳು, ನಿರ್ಭಯವಾಗಿ ಮಹಾ ಪುರುಷನ ಕವಿತಾ ಸಾಮಗ್ರಿ.

ಒಬ್ಬರ ಮು...

ತುಂಬಿದೆ. ಸಮಾಜದ ಅನ್ಯಾಯ ಅತ್ಯಾಚಾರಗಳ ಕೆಡುಕಿನ ಬಗ್ಗೆ ವಿರುದ್ಧವಾದ ಕಿಡಿನುಡಿಗಳೂ ಇವೆ. ಮೂರ್ಖ, ಲುಬ್ಧ, ಡಾಂಭಿಕ, ಮೋಸಗಾರ ಇತ್ಯಾದಿ ದುಷ್ಕರ್ಮಿಗಳನ್ನು, ಅತಿ ತೀವ್ರವಾಗಿ ಖಂಡಿಸಿದ ಸಿಡುಕಿನ ನುಡಿಗಳೂ ಸೇರಿವೆ. ಅಲ್ಲದೆ ಈತನು ಉತ್ತಮ ಜನಜೀವನ ಮಾರ್ಗವನ್ನೆತ್ತಿ ಸೂಚಿಸಿದ್ದಾನೆ.

ಈ ಕವಿಯ ಕಾಲ ವಿಮರ್ಶಕರು 17ನೇ ಶತಮಾನವೆಂದು ನಿರ್ಧರಿಸಿದ್ದಾರೆ. ಆಗ ಶೈವ, ವೈಷ್ಣವ ಮತಗಳ ಆರ್ಭಾಟ, ವೇಷಧಾರಿಗಳ ಕಪಟ, ಮತದ ಮುಸುಗಿನಲ್ಲಿ ಅನ್ಯಾಯದ ಧನಾರ್ಜನೆ, ಸೋಮಾರಿತನ, ಎಲ್ಲವೂ ದೈವಿಕವೆನ್ನುವ ಮೂಢವಿಶ್ವಾಸ ಬೇರೂರಿದ್ದವು. ಇವುಗಳನ್ನೆಲ್ಲಾ ತೆಗಳಿ, ಪುರುಷ ಯತ್ನವಿರಬೇಕು, ಪ್ರಯತ್ನ ಮಾಡಬೇಕು ಎಂದು ತನ್ನದಾದ ಒಂದು ಗೀತೆಯಲ್ಲಿ "ವ್ರಾತಕಜುಡು ಕರ್ತ ಚೇತಕು ತಾಕರ್ತ" ಎಂದು ಹೇಳಿ "ಯತ್ನೇ ಫಲಿ" ಯೆಂಬ ಸೂಕ್ತಿ ಸಾರಿದ್ದಾನೆ.

ಇವ ಹುಟ್ಟುಕವಿ, ಈತನ ಸಹಜ ಕವಿತೆಯಲ್ಲಿನ ಉಪಮೆಗಳು ಊಹಿಸಿ ಹೇಳಿದವು ಅಲ್ಲ, ಜನಜೀವನ ಸ್ರವಂತಿಯಲ್ಲಿ ಅನುನಿತ್ಯ ಕಾಣುವ, ಬಳಸುವ, ಬಯಸುವ, ಅಂಶಗಳನ್ನೇ ಆಯ್ದುಕೊಂಡಿದ್ದಾನೆ. ಕಾವ್ಯಗಳನ್ನು ಓದಿ, ಶೋಧಿಸಿ ಮನನ ಮಾಡಿಕೊಂಡು ಗುಣದೋಷಗಳ ವಿವೇಚನೆಯಿಂದ ಪದ್ಯ ಕಟ್ಟಿದವನೂ ಅಲ್ಲ, ಮತ್ತೊಬ್ಬ ಕವಿಯ ಮಾರ್ಗ ಅನುಸರಿಸಿ ಅನುಕರಣೆ ಮಾಡಿದವನೂ ಅಲ್ಲ. ದೇಶ ಸಂಚಾರದಲ್ಲಿ ತನಗೆ ಕಂಡದ್ದನ್ನು, ಉತ್ತಮ ಭಾವೋದ್ವೇಗದಿಂದ ಹೇಳಿದ ನುಡಿಗಳೇ ಈತನ ಕವನ ರೂಪಕಗಳು. ಈ ಕವನಗಳನ್ನು ಆ ಕವಿತಾ ಮಹರ್ಷಿಯನ್ನು ಹಿಂಬಾಲಿಸಿದ ಶಿಷ್ಯವರ್ಗ, ಮತ್ತು ಕಿವಿಯಾರೆ ಕೇಳಿದ ಶ್ರೋತೃಗಳು ಬರದಿಟ್ಟಂತೆ ಕಾಣಿಸುತ್ತದೆ.

ಈ ಕವಿ ಛಂದೋಬದ್ಧವಾಗಿ ಹೇಳಿದ ಆಟವೆಲದಿ ಗೀತೆಗಳಲ್ಲದೆ, ಅಲ್ಲಲ್ಲಿ ಕಂದ ಪದ್ಯಗಳು, ತೇಟ ಗೀತೆಗಳು ಎಂಬ ಚಿಕ್ಕ ಚಿಕ್ಕ ಪದ್ಯಗಳು ಸಹಾ ಕಾಣಿಸುತ್ತಾವೆ. ಈ ಪ್ರಜಾ ಕವಿ ವೇಮಣ್ಣನ ಕವಿತೆಗೆ ದೊರೆತಷ್ಟು ಪ್ರಚಾರ, ಆದರ, ಪ್ರೀತಿ, ತೆಲುಗಿನ

ಈತನ ಪದ್ಯಗಳು ಆಂಧ್ರನಾಡಿನ ತುಂಬಾ ಗಾದೆಯ ಮಾತುಗಳಂತೆ ಹರಡಿವೆ. ಓದಲು ಬಾರದ ಪಾಮರರಿಗೂ ಚಿರಪರಿಚಿತ, ವೇಮಣ್ಣನ ಕವಿತಾಮೃತವನ್ನು ಸವಿಯಬೇಕೆಂದು ಮುಗ್ಧರಾದ ವಿದೇಶೀಯರು ತುಂಬಾ ಶ್ರಮಿಸಿ, ತೆಲುಗು ಸಂಸ್ಕೃತಗಳನ್ನು ಅಭ್ಯಾಸಮಾಡಿ ಆಂಧ್ರನಾಡಿನ ನಾಲ್ಕು ಮೂಲೆಗಳನ್ನು ಸುತ್ತಿ ವೇಮಣ್ಣನ ಕವನಗಳ ತಾಳಪತ್ರ ಪ್ರತಿಗಳನ್ನು ಒಟ್ಟುಗೂಡಿಸಿ ಮುದ್ರಣವನ್ನು ಮಾಡಿಸಿ ಓದಿ ತೃಪ್ತಿಪಟ್ಟು ಅವರವರ ಭಾಷೆಗಳಲ್ಲಿ ಅನುವಾದ ಮಾಡಿಕೊಂಡರು.

ಇಂತಹ ಕವಿತಾ ನಿಕ್ಷೇಪ ಸಂಪದೆಯನ್ನು ಬಹಿರ್ಗತಮಾಡಿ ಆ ವಸ್ತು ಹೊಳಪನ್ನು ಆಂಧ್ರನಾಡಿನ ಸುಧೀ ಜನ ಮಾನ್ಯರಿಗೆ ದರ್ಪಣವಿಡಿದು ತೋರಿಸಿದಂತೆ ತೋರಿಸಿದ ಆಂಗ್ಲೇಯ ಪಂಡಿತರಿಗೆ ಆಂಧ್ರ ಜನತೆ ಚಿರಋಣಿಗಳೆಂದರೇ ಆಶ್ಚರ್ಯ ಪಡಬೇಕಾದುದೇನಿಲ್ಲ.

ಇಡೀ ಆಂಧ್ರನಾಡಿನ ಮೆಚ್ಚಿಗೆ ಪಡೆದುದಲ್ಲದೆ, ದೇಶ ಪರದೇಶಗಳಲ್ಲಿ ಪ್ರಖ್ಯಾತಿ ವಹಿಸಿದ ವೇಮಣ್ಣನ ಕೃತಿಯ ರಸದೂಟ ಸವಿಯನ್ನು ಅಕ್ಕ ಪಕ್ಕದ ನಾಡಿನವರಾದ ನಾವು ಸವಿಯಬೇಕೆಂದು, ನಮ್ಮ ಚಿಕ್ಕ ಮಕ್ಕಳು ಆ ಗೀತೆಗಳನ್ನು ಕಲಿತು, ಬಾಯಾರೆ ಹಾಡಿ, ನೀತಿ ನಿಯಮಗಳನ್ನು ಮನದುಂಬಿಸಿಕೊಳ್ಳಬೇಕೆಂದೂ, ಉಭಯ ಭಾಷೆಗಳಲ್ಲಿ ಪ್ರವೇಶವಿರುವ ನಾನು ಈ ಅನುವಾದ ಮಾಡಲು ಪ್ರಯತ್ನ ಮಾಡಿದ್ದೇನೆ.

ವೇಮಣ್ಣನ ಗೀತೆಗಳು ಎಣಿಕೆಗೆ ಬಾರದಷ್ಟು ಸಾವಿರಾರು ಇವೆ. ಆ ಗೀತೆಗಳಲ್ಲಿ ಶುದ್ಧ ಪ್ರತಿಗಳಿಂದ ತಜ್ಞರು ಸ್ವೀಕರಿಸಿರುವ ಗೀತೆಗಳು ಎರಡು ಸಾವಿರ ಗೀತೆಗಳು. ಆ ಪ್ರತಿಗಳಿಂದ ನಾನು ಆರಿಸಿಕೊಂಡಿರುವ ಗೀತೆಗಳು ಆರುನೂರಾ ಹತ್ತು.

ಇವುಗಳನ್ನು ಅನುವಾದ ಮಾಡುವದರಲ್ಲಿ ನನ್ನ ಕೃಷಿಯೆಷ್ಟು ಮಾತ್ರ ಸಾಫಲ್ಯ ಹೊಂದಿರುವದೋ ಓದುಗ ಮಹಾಶಯರೇ ಒರೆಗಲ್ಲಾಗಿ ನಿರ್ಣಯಿಸಲಿ.

ಇಂತು

ಗಡಿನಾಡು ಕನ್ನಡಿಗ



# ಶ್ರೀ ವಿನಾಯಕ ಸ್ತುತಿ

ಕಂ॥ ಶ್ರೀ ಶಾಂಕರಿ ಜಾಹ್ನವಿಯರ
ಆಶಾ ತರುಜನಿತ ವರ ಮಹಾಫಲ ರೂಪಾ
ಪಾಶಾಂಕುಶ ಕರಧಾರೀ
ಭಾಸಿಪ ಬಾಲೇಂದು ಮೌಳಿ ಭಜಿಸುವೆ ಗಣಪಾ

ಆ॥ವೆ॥ ವಿಘ್ನ ತಮವ ನಳಿಪ ವಿಘ್ನ ನಾಯಕ ನೀನು
ಗಿರಿಜೆಯ ಮುಖಕಮಲ ತರಣಿ ನೀನು
ಕಾವ್ಯ ನೌಕೆ ನಡೆಪ ಕರ್ಣಧಾರನು ನೀನು
ಕರುಣಿಸೆನ್ನ ದೇವ ಕರವ ಮುಗಿವೆ



# ಶ್ರೀ ಶಾರದಾ ಸ್ತುತಿ

ಆ॥ವೆ॥ ಬ್ರಹ್ಮ ಮುಖದಿ ಜನಿಸಿ ಬ್ರಹ್ಮಾಂಕವೇರಿದ
ಅಖಿಲ ದೇವ ಮಾತೆ ಅಮಲ ಚರಿತೆ
ವಚನ ಶುಚಿಯನಿತ್ತು ರಚನೆ ಸಾಗಿಸು ಮಾತೆ
ಪ್ರಣತಿ ಗೈವೆ ನಿನ್ನ ಪಾದ ಕೆರಗಿ

ಆ॥ವೆ॥ ಪುಂಡರೀಕ ನಾಕ ಶುಂಡಾಲ ಪೀಯೂಷ

ಆ||ವೆ|| ಆಂಧ್ರ ವೇಮನ ಕೃತಿ ಹರ್ಷದಾಂಗ್ಲೇಯನು
ಆಂಗ್ಲ ಭಾಷೆಯಲ್ಲಿ ಅನುವದಿಸಿದ
ಕನ್ನಡಿಗನು ನಾನು ಕನ್ನಡದನುವಾದ
ಮಾಡಲಿಚ್ಛಿಸಿದೆನು ಮಮತೆಯಿಂದ

ಆ||ವೆ|| ಇತರ ಖಂಡದವರು ಎಷ್ಟೊ ಮನ್ನಣೆ ನೀಡಿ
ತೆಲುಗಿನ ತಿಳಿತನವ ತಿಳಿದರೆಂದೊ
ಅಕ್ಕ ಪಕ್ಕ ಕವನದಂದವರಿತ ನಾನು
ಮಾಡಲಿಚ್ಛಿಸಿದೆನು ಮಮತೆಯಿಂದ

ಆ||ವೆ|| ಅನ್ಯ ದೇಶದವರು ಆಂಧ್ರ ವೇಮನ ಯೋಗಿ
ಆತ್ಮ ರೂಪನೆಂದು ಅರ್ಚಿಸಿದರು
ಆಂಧ್ರ ಕವಿತೆ ಬಲ್ಲ ಅಲ್ಪನು ನಾಂಸೇವೆ
ಮಾಡಲಿಚ್ಛಿಸಿದೆನು ಮಮತೆಯಿಂದ

ಆ||ವೆ|| ನಿಕರ ನೀತಿ ತತ್ವ ಸುಕರ ಪದ್ಧತಿಯಲ್ಲಿ
ಪ್ರಜೆಗೆ ತಿಳಿಸಿ ಬಂದ ಪರಮ ಯೋಗಿ
ಬಣ್ಣಿಸಲಳವಲ್ಲ ಅಣ್ಣ ವೇಮಣ್ಣನ
ಆ ಮಹರ್ಷಿ ಕೃತಿಯನನುವದಿಸುವೆ

ಆ||ವೆ|| ತೆಲುಗು ಭಾಷೆ ಗುರುವು ತಿದ್ದಿಸಿ ಕಲಿಸಿದ್ದು,
ಕನ್ನಡ ಮನೆಭಾಷೆಯೆನ್ನ ಭಾಷೆ,
ಮಲಯಜ ಸಮ, ನನ್ನ ಮನೆಯ ಭಾಷೆಯರಿತೆ
ತೆಲುಗಿನ ತಿಳಿತನವ ತಿಳಿದೆನೆಂದೊ

ಆ||ವೆ|| ಆಟವೆಲದಿ ಕವನಕಂದವನ್ನು ತರಲು

ಕಂ॥ ಶಿವನಿಗೆ ಗುರುವಿಗೆ ತತ್ವಕೆ
ಶಿವಭಕ್ತಿಗೆ ಪ್ರಮಥ ಗಣಕೆ ಚಿಂತಾಮಣಿಗಂ
ಶಿವ ಕವಿಗಳಿಗೆ ಸಭಕ್ತಿಯ
ನವಕವಿನಾಥರಿಗೆ ಬಾಗಿ ನಮಿಸೋ ವೇಮಾ

# 1. ಮೂರ್ಖ ಪದ್ಧತಿ

ಆ॥ವೆ॥ ಕಾಡು ಕಾಡು ಸುತ್ತಿ ಕಾಂಕ್ಷೆಯನ್ನು ಬಿಡದೆ
ಘಾಸಿ ಬೀಳುವವನು ಘನನು ಅಲ್ಲ
ಹೇಸಿ ಹೇಸಿ ಮನವ, ವಾಸಿಯಿಂ ನಿಲ್ಲಿಸ-
-ಲವನು, ಮುಕ್ತಿ ಕಾಣುವವನು ವೇಮ

ಆ॥ವೆ॥ ಅರಿವು ಇಲ್ಲದವನು ಬರಿ ಓದಿ ಫಲವೇನು
ಓದಿದಷ್ಟು ಹೊತ್ತು ಒಳ್ಳಿಗನಿಹ
ಕಮಲವನ್ನು ಸೇರಿ ಕಪ್ಪೆ ಕೂತಿರುವಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅಹುದು ಎಂದು ಒಬ್ಬನಾಡಿದ ಮಾತನ್ನು
ಸಲ್ಲದೆಂದು ಅನಲು ಸಾಕು ಕ್ಷಣವು
ಅದು ಸಮರ್ಥನೀಯವಪ್ಪುದು ಬಲುಕಷ್ಟ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಇತರರನ್ನು ಕೆಡಿಸಲಿಚ್ಛೆಯ ಮಾಡಲು
ತಮಗೆ ಕೇಡದುಂಟು ಧಾತ್ರಿಯಲ್ಲಿ
ತಮಗೆ ಕೇಡು ದೈವ ತಾರದೆ ಬಿಡುವನೇ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಇಲಿಯ ತೊಗಲು ತಂದು ಇಡಿ ವರ್ಷ ಒಗೆದರು

ಅವರು ನುಡಿದ ರೀತಿ ಹಾಗು ಕ್ರಮದಿ
ಅವರು ಅರಿಯರೆಂದು ಅನುವರೇ ಮೂರ್ಖರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಒಳಿತು ಕೇಡರಿಯದೆ ಊನಬುದ್ಧಿಗಳೆಲ್ಲ
ಸುಗುಣ ಧೀಜನರನು ತೆಗಳುತಿಹರು
ಆನೆ ಹೋಗುತಿರಲು, ಶ್ವಾನವೂದರಿದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಒಡಲು ಒಣಗು ಮಾಡಿ ಯೋಗಿಗಳೆಂಬರು
ಮನದ ಕೊಳೆಯ ತೊಳೆದ ಮಾನ್ಯರಲ್ಲ
ಹೊಡೆತ ಹುತ್ತಿಗಿಡಲು ಉರಗಕೆ ಸಾವುಂಟೆ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಕರ್ಮ ಗುಣಗಳೆಲ್ಲ ಕಡೆಗಿಟ್ಟು ನಡೆಯದೇ
ತತ್ವವೇಕೆ ಒಲಿದು ತನ್ನದಹುದು
ಎಣ್ಣೆಯಿಡದೆ ದೀಪ ಎಳ್ಳಿಟ್ಟಿರುರಿವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಕಂಡ ಬೆಳೆಸಿ ಕೊಬ್ಬಿ ಕಾಣ ಮರಣವನ್ನು
ಮದದಿ ಕಾಣ ತತ್ವ ಮಹಿಮೆಯನ್ನು
ಭೋಗದಿಚ್ಛೆಯಿಂದ ಪುಣ್ಯವನ್ನರಿಯನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಕಲಿಸಲೆತ್ತು ಕಲಿಕೆ ಕಲೆವುದು ವರುಷಕ್ಕೆ

ಯಾರು ಹೇಳಲು ಗುಣಿಆಗನು ಮೂರ್ಖನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕಬಳ ಉಣ್ಣಲಿರದೆ ಕಡು ಕಷ್ಟ ಪಡುವಂಗೆ
ನಿಂತು ಇರದು ವಿದ್ಯೆ ಯೆಂತದಿಹುದು
ಹಸಿಯ ಕೊಡದಿ ನೀರು ಬಸಿ ಪೋಗದಿರುವವೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕೊಡನು ಒಪ್ಪಿ ತಾನೆ, ಕೊಡಲೊಲ್ಲ ಹೇಳಲು
ಇಂಥ ಲೋಭಿಯನ್ನು ಎಣಿಸಲೇಕೆ
ತವುಡು ತಿನುವ ಸೂಳೆ ತಾನನ್ನವಿಡುವಳೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಖಳನ ಖಳನು ಮೆಚ್ಚು, ಒಲಿಮೆಯಿಂದಜ್ಞಾನಿ
ಲೋಭಿಯನ್ನು ಮೆಚ್ಚು, ಲೋಕದಲ್ಲಿ
ಪಂದಿ ಕೊಳೆಯ ಮೆಚ್ಚು, ಪನ್ನೀರುಮೆಚ್ಚದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗಂಧಲೇಪನವನು ಕತ್ತೆಗೆ ಮಾಡಲು
ಬೂದಿಯಲ್ಲುರುಳುವ ಬುದ್ಧಿ ಬಿಡದು
ಹೆಡ್ಡನ ಮನವಿಂತು ಖಡ್ಗಾಟಕೀಡಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಜಾಲಿಗಿಡಕೆಮುಳ್ಳು ಸಸ್ಯದಿಂ ಪುಟ್ಟುಗು
ಬೀಜವು ಸಸಿಯಾದ ವೇಳೆಯಲಿ

ಸುರಿವರು ಧನವನ್ನು ಸೂಳೆಯರಿಗೆ
ಸೂಳೆಗಿಂತಲು ಗುರುವು ಕೀಳಾದಗುಣೆಯೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ತನ್ನ ಹಿತವ ಬಯಸಿ ಧರ್ಮವ ಪೇಳಲು
ಎದುರು ನಿಂತು ಬೈವ ಹೆಡ್ಡ ಮನುಜ
ಮೇವಿಡಲಿರಿಯೆತ್ತು ಮೇಲಾಡಿಸದೆ ಕೋಡು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮನದೊಳಗಿನಮುಕ್ತಿ ಮತ್ತೊಂದುತಾವಲ್ಲಿ
ಹುಡುಕ ಹೋಗುವವನು ಹುಚ್ಚನಪ್ಪ
ಕುರಿ ಬಗಲಲಿಹಿಡಿದು ಗೊಲ್ಲ ಹುಡುಕಿದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮರವ ತಿದ್ದಬಹುದು ಮತ್ತೆ ಡೊಂಕಾಗದೆ
ಕಲ್ಲ ತಿದ್ದಬಹುದು ಕಳೆಯ ತುಂಬಿ
ಮನವ ತಿದ್ದಬರದು ಮಹಿಯಲ್ಲಿಯಾರಿಗು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮಾತು ತಾರು ಮಾರು ಮಾಡುವ ಮೂರ್ಖಂಗೆ
ಜಗದ ನಿಯತಿಯಿಲ್ಲ ಸುಗತಿಯಿಲ್ಲ
ನೀರಿನಲ್ಲಿ ಬರಹ ನಿಲ್ಲದೆ ಇದ್ದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮೃಗವು ಮೃಗವು ಎಂದು ಮೃಗವ ನಿಂದಿಸುವರು

ಕೆಡುತಿರಲು, ಮೊರಟನು ಕೆಡುವದೇನಾಶ್ಚರ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 25

ಆ॥ವೆ॥ ಶಿವನ ಮಂತ್ರವೆ ಅದು, ಶ್ರೀ ವಿಷ್ಣು ಮಂತ್ರವು
ಎಂದು ಅರಿಯದಿರುವ ಹೆಡ್ಡಜನರು
ಹರಿ ಹರರಿಗೆ ಭೇದ ಹರಡಿ ಕಾಣುತಿಹರು
ವಿಶ್ವದಾಭಿ ರಾಮ ವೇಮ ತಿಳಿಯೊ 26

ಆ॥ವೆ॥ ಸತ್ಪ್ರವರ್ತನವನು ಸಾಧ್ವಿತಾನರಿವಳು
ಜಾರೆಯರಿವಳೇನು ಜಗತಿಯಲ್ಲಿ
ಪರವ ಜ್ಞಾನಿಯರಿವ ಪಾಮರನರಿವನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 27

ಆ॥ವೆ॥ ಹಾವಿಗಿಂತ ಪಾಪಿ ಹಾಳು ಪ್ರಾಣಿಯೆ ಇಲ್ಲ
ಅಂಥ ಹಾವು ಹೇಳಿದಂತೆ ಕೇಳ್ಗು
ಖಳನ ಮಾರ್ಪಡಿಸುವ ಘನರಾರು ಇಳೆಯಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 28

ಆ॥ವೆ॥ ಎಷ್ಟೊ ವಿದ್ಯೆಗಳನ ಹೀನಕಲಿತರೇನು
ಧರೆಯಲಿ ಘನನಾಗ ಗರುವದಿಂದ
ಗಂಧದ ಹೊರೆಹೊರಲು ಘನವಪ್ಪುದೇ ಕತ್ತೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 29

ಆ॥ವೆ॥ ಹೆಂಡತಿ ಪಿಸು ಮಾತು ಹೇಳಲು ತಾ ಕೇಳಿ

ಚೊಕ್ಕಟ ಬೆಳೆ ಬಿಟ್ಟು ಹಕ್ಕಲಾರಿಸಿದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕುಲಟೆ ಹೆಣ್ಣಿಗೇಕೆ ಹಳೆಯ ವಾವಿಯ ಬಂಧ
ಚಾಡಿ ಕೋರಗೇಕೆ ತತ್ವ ಗುಣವು
ಮೂಢಮತಿಗದೇಕೆ ಮುದದಿ ಸುಜ್ಞಾನವು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅಣಕವಿರಿಸಿ ಮನವ ಆನಂದದಲಿ ತೂಗಿ
ಬ್ರಹ್ಮಮಯನು ಮುಕ್ತಿಪದವ ಬಗೆವ
ನಾಲಿಗೆ ರುಚಿಯಿಂದ ನಾಶಜೀವನಿಗುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸ್ಥಾನವಿಲ್ಲದಲ್ಲಿ ಸಹನದಿಂ ದ್ಯೂತವ
ನಾಡಿಯಾಡಿ ಸೋತು ಅಡವಿ ಹೊಕ್ಕ
ಧರ್ಮಜನ ಗತಿಕಂಡು ತಡೆ ಮೂರ್ಖತನವನ್ನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹುಟ್ಟುವ ತನುವಿನಲಿ ಇಟ್ಟಿದ್ದ ಜೀವನ
ಕಾಣದಲೆ ಮನುಜನು ಕಾಶಿ ಸೇರಿ
ಹುಡುಕಿ ಹುಡುಕಿ ಕಡೆಗೆ ಹುಚ್ಚನಾಗುವನಪ್ಪ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬರಿ ತೊಗಲಿನ ತಿತ್ತಿ ಫಲವಿಲ್ಲವಿದರಿಂದ
ತಿತ್ತಿಗಾಗಿ ಕೆಡುವ ದೇವಿಯಾಡಿ

ಆ॥ವೆ॥ ಕಫವುಹೆಚ್ಚಿ ಮತ್ತು ಕಣ್ಣುಮುಚ್ಚಿಗೆಬಿದ್ದು
ಬುದ್ಧಿ ಜಡತೆಯಿಂದ ಪೊಡವಿ ಮರೆತು
ಹೋಗುವಾಗ ಹರನ ಹುಡುಕಲು ಸಾಧ್ಯವೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 37

ಆ॥ವೆ॥ ಮಿಥ್ಯವಾದ ಜಗವು, ತಥ್ಯವೆಂದು ತಿಳಿದು,
ಭ್ರಮೆಗೆ ಸಿಕ್ಕಿ ಹೆಣ್ಣಿ ಬಲೆಗೆ ಬಿದ್ದು;
ಮರೆತು ಬಿಟ್ಟರಯ್ಯ ಮಾಧವ ಪದಭಕ್ತಿ
ವಿಶ್ವದಾಭಿ ರಾಮ ವೇಮ ತಿಳಿಯೊ 38

ಆ॥ವೆ॥ ಹಸುಗಳು ಹುಲುತಿನುವವಲ್ಲವೆ ಸತತವು,
ಮಾಡುವವು ಕೆಲಸವ ಬೇಡಿದಂತೆ;
ಆ ಪಶುಗಳಿಗೆ ಸರಿಯಾಗನು ಮಾನವ
ವಿಶ್ವದಾಭಿ ರಾಮ ವೇಮ ತಿಳಿಯೊ 39

ಆ॥ವೆ॥ ಕಸವನು ತಿನುವವನು ರಸ ಫಲಂಗಳ ರುಚಿ
ಅರಿಯಲಾರನಲ್ಲ! ಅವನ ಹಾಗೆ,
ಸ್ವಲ್ಪ ವಿದ್ಯೆಯಿಂದ ಜ್ಞಾನವು ಹೆಚ್ಚದು,
ವಿಶ್ವದಾಭಿ ರಾಮ ವೇಮ ತಿಳಿಯೊ 40

ಆ॥ವೆ॥ ವಿಷ್ಣು ಭಕ್ತರೆಲ್ಲ ಬಿಳುಪು ಬೂದಿಯಪಾಲು,
ಸ್ಥಾಣು ಭಕ್ತರು ತಿರುಮಣಿಯಪಾಲು
ವಾದಮಾಡಲೇಕೆ ಭೇದವೆಣಿಸಲೇಕೆ
ವಿಶ್ವದಾಭಿ ರಾಮ ವೇಮ ತಿಳಿಯೊ 41

## 2. ಡಾಂಭಿಕ ಪದ್ಧತಿ

ಆ॥ವೆ॥ ಅಂತರದಿ ವಿಕಾರವಂತವ ಮಾಡದೆ
ತಪಸಿಯಾಗಲಾರ ತಪನದಿಂದ
ಮೇಲೆ ವೇಷದಿಂದ ಮಾಲೀಕನೆಂತಪ್ಪ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆಸನಗಳಹಾಕಿ, ಆದ್ಯಂತ ಬಿಗಿಮಾಡಿ,
ಒಡಲು ಮುರಿದು ಕೊಳ್ವ ಯೋಗಿ ಜನರು,
ಒಳ್ಳೆ ಮಲ್ಲಗಿಂತ, ಎಳ್ಳಿನಷ್ಟೆ ಕಡಿಮೆ,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆತ್ಮ ಶುದ್ಧಿಯಿರದ ಆಚಾರವದು ಏಕೆ ?
ಗಡಿಗೆ ಶುದ್ಧವಿರದ ಅಡಿಗೆಯೇಕೆ ?
ಚಿತ್ತ ಶುದ್ಧವಿರದ ಶಿವನ ಪೂಜೆಗಳೇಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಇಹದಲಿ ಸುಖದಾಸೆ ಏನು ಬಿಡಲು ಇಲ್ಲ
ಪರದಲಿ ಸುಖವೆಂತು ಪಡೆಯ ಬಲ್ಲ
ಮೊದಲೆ ಇಲ್ಲದಾಗ ತುದಿಬಪ್ಪುದೆಂತಯ್ಯ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಉದ್ದವಿರು ಜಡೆಗಳು, ಹುಲಿಯ ಚರ್ಮವು, ಬೂದಿ
ಅಕ್ಷ ಮಾಲೆ ಹತ್ತು ಲಕ್ಷ ಧರಿಸೆ,

ಶಿವನ ಕಾಣಲು ಮನವವನಿಗಿಲ್ಲ,
ಮನೆಯಹೊಕ್ಕ ನಾಯಿ ಮಡಿಕೆಗಳರಸದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 49

ಆ॥ವೆ॥ ಕಾವಿಯನ್ನು ಹೊದ್ದು, ಘನಯೋಗಿಯಂತಿದ್ದು,
ಆಶೆಬಿಟ್ಟ ಕೃತಕವನ್ನು ತೋರಿ,
ಪೊಳ್ಳು ತಿರುಗುವವನು ಕಳ್ಳಾಟ ಸನ್ಯಾಸಿ
ವಿಶ್ವದಾಭಿ ರಾಮ ವೇಮ ತಿಳಿಯೊ 50

ಆ॥ವೆ॥ ಕಳ್ಳಮಂತ್ರದಿಂದ ಕೈವಲ್ಯದೊರೆವುದೇ ?
ನಡೆವುದಿಲ್ಲ ಸುಳ್ಳ ನಡತೆಯೆಂದು
ಗುರುವು ಆಗದವನ ಗುರುವೆನ್ನಲದು ಮೋಸ
ವಿಶ್ವದಾಭಿ ರಾಮ ವೇಮ ತಿಳಿಯೊ 51

ಆ॥ವೆ॥ ಕೇಳಿದ ನುಡಿ ಕೆಲವು, ಕೇಳದವು ಕೆಲವು,
ಚಕಿತಗೊಳಿಪ ಸುದ್ದಿ ಸಾರಿ ಹೇಳ್ವ,
ತಾನು ನೋಡಿದಂತೆ ದಾಂಭಿಕನಿರತವು,
ವಿಶ್ವದಾಭಿ ರಾಮ ವೇಮ ತಿಳಿಯೊ 52

ಆ॥ವೆ॥ ಘಟವ ಇಂದ್ರಿಯಗಳ ಕಟ್ಟದೆ ತಾಬಿಟ್ಟು,
ಸಾವು ಮುತ್ತುವಾಗ ಸನ್ನ್ಯಸಿಸಲು,
ಆತ್ಮಶುದ್ಧಿಯಿರದೆ ಅಪರೋಕ್ಷ ಸಿಗುವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 53

ಆ॥ವೆ॥ ಚಂದದಂದವಿದ್ದು, ಸರಸಳು ಆಗಿದ್ದು,

ಒಡಲು ಮುರಿಯುವಂಥ ಯೋಗವೇಕೆ ?
ಸುಲಭ ಮುಕ್ತಿ ಪಥವ ಸುಳುವು ತಿಳಿಯಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪಾಪಿ ದಾಂಭಿಕರಿಗೆ ಬಳಿ ನೀನಿರಲುಬೇಡ
ಮೋಸ ಮಾಳ್ಪರವರು ದೋಸವೆನದೆ
ಕಾಡು ಮೃಗಗಳಂತೆ ಕರುಣೆಯಿಲ್ಲವರಿಗೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತನುವು ನೀರಗುಳ್ಳೆ, ಧನವಶಾಶ್ವತವೆಂದು
ತಿಳಿಯ ಹೇಳುವವನೆ ತಿಳಿಯಲಾರ
ನುಡಿಯಲು ಬಹುಸುಲಭ, ನಡೆಯಲು ಬಹುಕಷ್ಟ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತಂತ್ರ ಮಂತ್ರಗಳಿಗೆ ತಾರಕ ಸಿಗುವುದೇ
ಯಂತ್ರ ಬಲದಲಿ ಗುರು ಮಂತ್ರವಿಡಿದು
ಧ್ಯಾನ ಧಾರೆಯಿಂದ ಧನ್ಯಾತ್ಮ ನೀನಾಗು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗುರುವು ತಾನೆಯೆಂದು ಪರಿಪರಿಯಿಂ ಕದ್ದು
ತಿರುಗುವವನು ತನ್ನನರಿಯಲಾರ
ದುಷ್ಟ ತನದಿ ಬಾಳ್ವ ತೊತ್ತಿನ ಮಗನವ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತ್ಯಾಗಿ ಆಗದವನ ನಳವಿಸಿ ಬೇಡಲು

ಚಿತ್ತದಲ್ಲಿ ಧ್ಯಾನ ಹತ್ತಿಯಿರದು,
ಕಾಸುಗಳಿಗೆ ತಿರುಗೆ ಕೈವಲ್ಯ ಸಿಗುವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಅಡ್ಡದಿಡ್ಡ ಬೆಳೆದು ಗಡ್ಡವುದ್ದಾದರು
ದಾನ ಗುಣವು ಇರದೆ ದಾತನಲ್ಲ
ಎಮ್ಮೆ ಬಲಿತರೇನು ಎನ್ನರು ಗಜವೆಂದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಪರರ ಮೋಸಗೊಳಿಸಿ ಪರಧನವಾರ್ಜಿಸಿ,
ಕೂಳು ತಿನ್ನಲವನು ಕೂಳನಕ್ಕು,
ರಿಣವ ಮಾಡುವವನು ಗುಣವಂತನಾಗನು,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಪರಮ ಹಂಸನೆಂದು ಪಟ್ಟವತಾನೇರಿ,
ಪರರ ಧನಕೆ ಆಶೆ ಪಡುವ ಸ್ವಾಮಿ,
ಪರಮ ಹಂಸನಲ್ಲ ಪರಹಿಂಸೆಕಾರನೈ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮಖಗಳನ್ನು ಬಹಳ ಮಾಡಲು ಫಲವೇನು
ಆತ್ಮಯಜ್ಞಕೆ ಸರಿಯಾವುದಿಲ್ಲ
ಯಾಗ ಮಾಡುವವರು ಅರಿಯಲು ಕಳ್ಳರೇ!
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ವೇಷ ಹಾಕುವವನು ವಿನಯ ತೋರ್ವನು ಹೆಚ್ಚು

ಅರಿಯದವರ ಕಂಡು ಹಾಸ್ಯಗೈದು
ಹೇಸಿ ದ್ವಿಜರಿಗಿಂತ ದಾಸರ ಕುಲ ಹೆಚ್ಚು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ವೇಷಧಾರಿಯಲ್ಲಿ ವಿಶ್ವಾಸ ಒಳಿತಲ್ಲ
ವೇಷ ಮೋಸಕೆ ಪರಿಭಾಷೆಯಹುದು
ರಗಳೆತಂತುಮುನ್ನ ರಾವಣ ವೇಷವು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಶೀಲವೆನುತ ನರನು ಸಿಗ್ಗೇನು ಇರದಂತೆ
ಪರರ ವಸ್ತುಗಳನ ಹರಣಮಾಡಿ
ವೇಷ ಭಾಷೆಯಿಂದ ಮೋಸ ತಾ ಮಾಳ್ಪನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹಸಿವಿಗೆ ಜರಿಯುವದು ಆಚಾರ ವಿಧಿಯೆಲ್ಲ
ಕತ್ತಲಿಗೆ ಜರಿವುದು ಚಿತ್ತಶುದ್ಧಿ
ಬಸಿರಿಗೆ ಜರಿಯುವದು ಕಸವು ಹಿಂದಿನದೆಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹೆಂಡದ ಮೊಗೆ ಮೇಲೆ ಹೆಚ್ಚು ಬೂದಿಯಿಡಲು
ಒಳಗಿನ ಹಳೆ ಕಂಪು ಅಳಿವುದುಂಟೆ ?
ಹಗ್ಗ ಕತ್ತಿನಲ್ಲಿ ಹಾಕಲು ವಿಪ್ರನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮನೆಯವಾಸಬಿಟ್ಟು, ಮಡದಿಯೋಳ್ ಭ್ರಮೆ ಬಿಟ್ಟು

ಕುನ್ನಿ ಸಿಂಹವಹುದೆ ಗೋದಾವರೀಜಲು ?
ವಿಶ್ವದಾಭಿ ರಾಮ ವೇಮ ತಿಳಿಯೊ 73

ಆ॥ವೆ॥ ಮೋಸದಿಂದ ತನಗೆ ಮೊದಲೆ ಬಪ್ಪುದು ಹಾನಿ,
ಮೋಸದಿಂದ ಯಶವು ಮಾಸಲಕ್ಕು
ಮೋಸದಿಂದತಪ್ಪು ಮುಕ್ತಿಯಸೋಪಾನ,
ವಿಶ್ವದಾಭಿ ರಾಮ ವೇಮ ತಿಳಿಯೊ 74

ಆ॥ವೆ॥ ತಲೆಯಸ್ನಾನಮಾಡಿ, ಧನ ಹುಂಡಿಯಲಿಹಾಕಿ,
ನರನು ಸುರರಿಗೆಲ್ಲ ನಮಿಸಲೇಕೆ,
ಹೊಟ್ಟೆಯಲ್ಲಿ ಕಪಟ ಹೊಲಸು ತುಂಬಿಯಿರಲು
ವಿಶ್ವದಾಭಿ ರಾಮ ವೇಮ ತಿಳಿಯೊ 75

ಆ॥ವೆ॥ ಪಟ್ಟೆ ನಾಮವಿಟ್ಟು, ಪಟ್ಟೆ ಪಂಚೆಯನುಟ್ಟು,
ಭ್ರಾಂತಿ ಪಟ್ಟು ವೈಷ್ಣವಾದೆನೆಂದು,
ಕುಡಿದು ಕುಡಿದು, ಲೋಕ ಕೆಡಿಸುವನಾತನು,
ವಿಶ್ವದಾಭಿ ರಾಮ ವೇಮ ತಿಳಿಯೊ 76

ಆ॥ವೆ॥ ಆರುಮತಗಳಲ್ಲಿ ಅಧಿಕ ಲಿಂಗಮತವು,
ಮಹಿಯಲದಕೆ ಸಾಟಿ ಮತವೆ ಇಲ್ಲ,
ಆದರೇನು ಕಳ್ಳರಲ್ಲಿ ಸೇರಿರುವರು
ವಿಶ್ವದಾಭಿ ರಾಮ ವೇಮ ತಿಳಿಯೊ 77

ಆ॥ವೆ॥ ಮತದ ವೇಷದವರು ಮಹಿಯಲ್ಲಿ ಬಹುಜನ,
ಮೂಢ ಜನರ ಮೋಸ ಮಾಡುತಿಹರು,

ಗುಡಿಗಳು ಬಹುಕುಂಭ ಗೋಪುರಗಳು,
ಅನ್ನ ವಸ್ತ್ರಗಳನ ಆಶೆಮಾಳ್ಪನೆ ದೇವ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕಲ್ಲು ಪ್ರತಿಮೆಯಾದ ಘನದೇವನಿಳೆಯಲ್ಲಿ
ಅದಕೆ ನಮಿಸುವ ಜನರದುವೆಯಲ್ತೆ
ದೇವರ ಸಮತುಲನ ತಾವಾಗಬಲ್ಲರೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹೆಚ್ಚು ಸಂಖ್ಯೆ ಸೇರಿ ಹುಚ್ಚು ನಾಯಿಗಳಂತೆ
ವೇದವರ್ಥವಿರದೆ ಓದಲೇಕೆ ?
ಗಂಟಲ ಕಳಕುಳವೆ, ಕಾಣಲು ಫಲವಿಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹೀನ ಜಾತಿಯವಗೆ ಇತ್ತು ವೈಷ್ಣವ ದೀಕ್ಷೆ
ದ್ವಿಜರಿಗಿಂತ ದೊಡ್ಡ ತೀರ್ಥನೆನಲು
ಕಟ್ಟುವ ಮೊಗೆ ತೊಳೆದು ಗಂಗೆತುಂಬಿದರೀತಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಊರು ಊರು ಅಡವಿ ಹೊಕ್ಕುತ್ತ ತಿರುಗತ್ತ
ಕಂದ ಕಾಯಿ ಕಸರು ತಿಂದರೇನು
ವಂಚಕನಿಗೆ ಸಿಗದು ಅಂಚಿತ ಶ್ರೀಪದ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತತ್ವವನ್ನರಿಯದೆ ತಪಸಿಗಳೆನ್ನುವ

ಆ||ವೆ|| ಅರಸರಾದವರಿಗೆ ಆಹವ ಜಯ ಚಿಂತೆ
ಭಕ್ತ ತಾಪಸರಿಗೆ ಮುಕ್ತಿ ಚಿಂತೆ
ಅಲ್ಪ ನರರಿಗೆಲ್ಲ ಅಂಗನೆಯರ ಚಿಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಆರ್ಯರಾದಘನರು ಕಾರ್ಯಹೀನರು ಅಲ್ಲ
ಶೌರ್ಯ ಧೈರ್ಯಗಳನ ಸಂಧಿಸುತ್ತ
ಪೂರ್ಣ ಭಾವವರಿತು ಪೊಂದುತಲಿರುವರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಇಹ ಪರಗಳ ಭೇದವಿರದು ಸುಜ್ಞಾನಿಗೆ
ಪ್ರಾಣ ಭೀತಿಯಿರದು ಪ್ರಳಯದಲ್ಲಿ
ವಿಲಯ ಕಾಲ ಬರಲು ಕಲೆಯುವ ಶಿವನಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಉಪ್ಪಿನಂತಿರುವದು ಒಪ್ಪಿನ ಕರ್ಪೂರ
ನೋಡಲವುಗಳ ರುಚಿ ಜಾಡುಬೇರೆ
ಪುರುಷರಲ್ಲಿ ಪುಣ್ಯಪುರುಷರು ಬೇರಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಉತ್ತಮನು ಕುಲವನು ಉದ್ಧಾರ ಮಾಳ್ಪನು,
ಮಧ್ಯಮನಿಗೆ ಅದರ ಮಾತೆಇಲ್ಲ,
ಅಧಮ ನಾಶಗೈವ ಅದು ಲೇಶವಿರದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ವೇದಗಳಲಿಯಿಲ್ಲ ವಾದಗಳಲಿ
ದೇಹ ಶುದ್ಧಗೊಳಿಸಿ ದೇವ ದೇವನಕಾಣು
ವಿಶ್ವದಾಭಿ ರಾಮ ವೇಮ ತಿಳಿಯೊ 91

ಆ॥ವೆ॥ ಕಬ್ಬಿನ ಹೊಲದಲ್ಲಿ ಕಸದ ತಿಪ್ಪಿರಲೇನು
ಕಬ್ಬಿನ ಸಿಹಿ ಗುಣವು ಕರಗದಲ್ತೆ
ವಿಜ್ಞತೆಯಿರುವಲ್ಲಿ ಅಜ್ಞನು ಇದ್ದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ 92

ಆ॥ವೆ॥ ಕಾಗೆ ಗೂಡಿನಲ್ಲಿ ಕೋಗಿಲುದಿಸುವಂತೆ
ಭ್ರಮರವಾಗಿ ಕೀಟ ಬದುಕಿದಂತೆ
ಗುಣಿಗಳಾದ ಜನರು ಗುರುಗಳಾಗುವರಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 93

ಆ॥ವೆ॥ ಕೊಡವು ಕುಂಭವೆನಲು ಗುಡ್ಡವು ಗಿರಿಯೆನಲು
ಉಪ್ಪು ಲವಣವೆನಲು ಒಂದೆ ಅರ್ಥ
ಭಾಷೆಗಳವು ಬೇರೆ ಪರಮಾತ್ಮನೊಬ್ಬನೇ
ವಿಶ್ವದಾಭಿ ರಾಮ ವೇಮ ತಿಳಿಯೊ 94

ಆ॥ವೆ॥ ಕೋಗಿಲೆ ಕುಹುಯೆಂದ ಕೂಜಿತ ಸ್ವನದಂತೆ
ಪ್ರಾಜ್ಞರಾಡುವ ನುಡಿ ಬಹಳ ಮಧುರ
ಕಾಗೆ ಕೂಗಿನಂತೆ ಕರ್ಮ ಬದ್ಧರ ನುಡಿ
ವಿಶ್ವದಾಭಿ ರಾಮ ವೇಮ ತಿಳಿಯೊ 95

ಆ॥ವೆ॥ ಗಾಳಿಯಿರದ ದೀಪ ಕಳಿಕೆಯ ಚಂದದಿ

ಆ ಮಹಾನುಭಾವನನ್ನು ನಿರತ
ನಿಷ್ಠೆಯಿಂದ ಭಜಿಸಿ ನೆಮ್ಮದಿಯನುಪಡೆ
ವಿಶ್ವದಾಭಿ ರಾಮ ವೇಮ ತಿಳಿಯೊ 97

।ವೆ॥ ಜಾತಿ ನೀತಿ ಬೇರೆ ಜನ್ಮತತ್ವವು ಒಂದೆ
ತಿನುವ ತಿಂಡಿ ಬೇರೆ ತಣಿವುದೊಂದೆ
ದರ್ಶನಗಳು ಬೇರೆ ದೈವವು ತಾನೊಂದೆ
ವಿಶ್ವದಾಭಿ ರಾಮ ವೇಮ ತಿಳಿಯೊ 98

।ವೆ॥ ತಪ್ಪು ಒಪ್ಪು ತಿಳಿದು ದೈವ ಸಂಕೀರ್ತನೆ
ಮಾಡಲು ಹರಿಸೇವೆ ಮಾಡಿದಂತೆ
ನೀತಿಯರಿಯದಂತೆ ನಿಂದೆಮಾಡಲು ಬೇಡ
ವಿಶ್ವದಾಭಿ ರಾಮ ವೇಮ ತಿಳಿಯೊ 99

।ವೆ॥ ತಾನು ನಾನು ಎನುವ ತತ್ವ ಭೇದವನೆಲ್ಲ
ಮಾಜುಮಾಡಿ ಜ್ಞಾನ ಮಹಿಮೆಯಿಂದ
ಮೌನವಿರುವ ಯೋಗಿ ಮಹಿಯಲುತ್ತಮನಪ್ಪ
ವಿಶ್ವದಾಭಿ ರಾಮ ವೇಮ ತಿಳಿಯೊ 100

।ವೆ॥ ದೇಹಗುಣಗಳೆಲ್ಲ ತಿಳಿದಂಥ ಶಿವಯೋಗಿ
ಮೋಹ ಗುಣಕೆ ಸಿಕ್ಕಿ ಮೋಸಪೋಗ
ನಿಂದ್ರಜಾಲಕನವ ಏಕೆ ತಾ ಸಿಗುವನು
ವಿಶ್ವದಾಭಿ ರಾಮ ವೇಮ ತಿಳಿಯೊ 101

।ವೆ॥ ದೇವ ಪೂಜೆಯಿಂದ ದಿವ್ಯ ಭೋಗಗಳುಂಟು

ಕರ್ಪೂರಾರತಿಯಲಿ ಕರಗಿದಂತೆ
ಬಂಧ ಮುಕ್ತಿ ಮಾಳ್ಪ ಪರಮಾತ್ಮ ಜೀವಿಗೆ
ವಿಶ್ವದಾಭಿ ರಾಮ ವೇಮ ತಿಳಿಯೊ 103

ಆ॥ವೆ॥ ಬೇಕು ಎನಲು ಬರದು ಸಾಕೆನೆ ಪೋಗದು
ಪೂರ್ವ ಪಾಪಕರ್ಮ ಭೂರಿಫಲವು
ಮನಸಿನಲ್ಲಿ ಚಿಂತೆ ಮಾಡದಿರಲುಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ 104

ಆ॥ವೆ॥ ಮನ ಪುನೀತವಾಗಿ ಮಾಡಿದ ಪುಣ್ಯವು
ಕೊಂಚವಾಗಿರಲದು ಕೊರತೆಬರದು
ಆಲದ ಮರವೆಷ್ಟು ? ಅದಕೆ ಬೀಜವದೆಷ್ಟು ?
ವಿಶ್ವದಾಭಿ ರಾಮ ವೇಮ ತಿಳಿಯೊ 105

ಆ॥ವೆ॥ ಮನವ ನಿಲಿಸಿದಂಥ ಮಾನ್ಯರಾದ ಬುಧರು
ಲಲಿತ ಮೋಕ್ಷ ಪದವಿ ತಲುಪುತಿಹರು
ಗಿಡ ಬೆಳೆಸಲು ಫಲವು ಕೊಡದೆ ತಾನಿರ್ಪುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 106

ಆ॥ವೆ॥ ತರೆಯೆ ತರೆಯೆಲನಲ ತರುವಲಿ ಜನಿಪುದು
ದಧಿಯ ಕಟೆಯೆ ಜನಿಪುದಾಗಬೆಣ್ಣೆ
ತನುವಿನಲ್ಲಿ ತತ್ವ ಮನನದಿಂ ಜನಿಪುದು
ವಿಶ್ವದಾಭಿ ರಾಮ ವೇಮ ತಿಳಿಯೊ 107

ಆ॥ವೆ॥ ಮನನವೃತ್ತಿಯೊಳಗೆ ಮಹಿಮೆಯನ್ನರಿಯುತ

ಮರ್ಮಪರಿತ ಮೌನ ಧರ್ಮವಕ್ಕು,
ಮೌನಬಿಡಲುತತ್ವ ಮರೆಯಾಗುವುದು ಸತ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮರಣ ಕಾಲದಲ್ಲಿ, ಮನನಿಲಿಸುವ ಜ್ಞಾನಿ,
ಪರವನು ಪಡೆಯುವನು ಪ್ರತಿಭೆಯಿಂದ,
ಮೊದಲಿನಾಶೆಗಳಿಗೆ ಕುದಿವನು ಅಜ್ಞಾನಿ,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಮೋಕ್ಷ ಕಾಣದಿರುವ ಮೂರ್ಖಜನರಿಗೆಲ್ಲ
ಬಟ್ಟೆ ಬಯಲು ಮಾಡಿ ಪರಮಪದವ
ದಾರಿ ತೋರುವ ಬುಧ ದೈವವಲ್ಲೇನಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ವ್ಯಾಧಿಯು ಬರಲಾಗ ವೈದ್ಯನ ಕಯ್ಯಿಂದ
ಓಷಧಿ ತಿನದಂತೆ ಹೋಗದಲ್ತೆ
ಅಂಧಕಾರ ದೀಪ ಹಚ್ಚದೆ ಪೋಪುದೇ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ವಿದ್ಯೆಯಿಲ್ಲದವನು ವಿದ್ಯಾಧಿಕರಕೂಡಿ
ಇರಲು ವಿಜ್ಞನಾಗ ಎಂತದೆನಲು
ಕೊಳದಿ ಹಂಸಗಳಲಿ ಕೊಕ್ಕರೆ ಇದ್ದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಹಸುಗಳೆಷ್ಟೊ ವರ್ಣ ಹಾಲೊಂದೆ ಬಣ್ಣವು

ಆ||ವೆ|| ಸಿಕ್ಕಿ ಸಿಗದೆ ಇರುವ ಚಿನ್ಮಯ ರೂಪನ,
ಮಾಣದೆ ಅನವರತ ಮನನ ಮಾಡಿ,
ಅರಿತು ಏನು ಅರಿಯದಂತಿರ್ಪ ಸುಜ್ಞಾನಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಕಲ್ಲು ಮಣ್ಣು ರತ್ನ ಕಬ್ಬಿಣ ಬಂಗಾರ
ಕಸದ ಕಡ್ಡಿಗೆ ಸಮ ಕಾಣುವವನೆ
ಪರಮನಲ್ಲಿ ಬೆರೆವ ಪರಿಣಾಮ ಒದಗಲು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಅಷ್ಟ ತನುವುಗಳಿಗೆ ಆದಿಯಾಗಿರುವಂಥ
ಆದಿಶಕ್ತಿ ಕೂಡಿ ಅಭವನಕ್ಕು
ಭಯವು ಇರದೆ ಇರುವ, ಬ್ರಹ್ಮವರಿತಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಆತ್ಮದಿರುವವಸ್ತು ಅಂಜನದಿಂಕಂಡು
ಅಂಟಿ ತಿರುಗು ತಿದ್ದರವನೆ ಯೋಗಿ
ಹುಂಜು ಗೂಡಲಿದ್ದು ಹೊತ್ತಿಗೆ ಕೂಗದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ||ವೆ|| ಈಜಿ ದಾಟ ಬಹುದು ಎಡರುಳ್ಳ ಕಡಲನ್ನು
ಸಾಧು ವೃತ್ತಿಯಿಂದ ಸಮಯವರಿತು
ಭದ್ರವಾಗಲು ಮನ ಪರಿಪೂರ್ಣನಾಗುವ
ವಿಶ್ವದಾಭಿ ರಾಮ ವೇಮ ತಿಳಿಯೊ

ಅಡುಸಿನಲ್ಲಡಗುವ ಅರ್ಕನಂತೆ
ಪೂತಸಲಿಲದಂತೆ ಪುಣ್ಯಮಾನಸರಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 121

||ವೆ|| ಕಪ್ಪಗಿಹುದು ಮೇಲೆ ಕಾಣಲು ಕಸ್ತೂರಿ
ಅದರ ಪರಿಮಳಕ್ಕೆ ಅದುವೆ ಸಾಟಿ
ಮಾನ್ಯ ಗುರುಗಳ ಗುಣ ಮಹಿಮೆಯಿಂತಿರ್ಪುದು
ವಿಶ್ವದಾಭಿ ರಾಮ ವೇಮ ತಿಳಿಯೊ 122

||ವೆ|| ಕರಿಯ ಗೋಸಿಯಲ್ಲ ಗಣ್ಯ ಚೀನಾಂಬರ
ಕೊಳಕು ತನುವದಲ್ಲ ಹೊಳೆವ ಮೋಕ್ಷ
ಇಹದಿ ಯೋಗಿ ಮಹಿಮೆಯಿಂತೆಂದು ಅರಿಯರು
ವಿಶ್ವದಾಭಿ ರಾಮ ವೇಮ ತಿಳಿಯೊ 123

||ವೆ|| ಜೀವ ಭೇದವರಿತು ಚಿಂತೆ ಬಿಟ್ಟ ಜನರು
ಬ್ರಹ್ಮ ಭಾವವರಿತು ಭಾಸಿಸುವರು
ನೀರು ಮುತ್ತದಾಗೆ ನೀರಾಗದದು ಮತ್ತೆ 124
ವಿಶ್ವದಾಭಿ ರಾಮ ವೇಮ ತಿಳಿಯೊ

||ವೆ|| ಜೀವಿಯಲ್ಲಿ ಭ್ರಾಂತಿ ಸೇರಿಕೊಂಡಿರುವುದು
ಜೀವಿ ಭ್ರಮೆಗಳಲ್ಲಿ ಸಿಲುಕದಿರಲು
ಜೀವಿ ಪರಮನಂತೆ ಚಿದ್ರೂಪನಲ್ಲವೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 125

||ವೆ|| ತನ್ನ ಮತವಬಿಡದೆ ಇನ್ನಿತರರಧರ್ಮ

## ೪. ಅರ್ಥ ಸಿದ್ಧಿ

ಆ॥ವೆ॥ ಆವನು ಉಣ್ಣದಂತೆ ಆಪ್ತರಿಗಿಡದಂತೆ
ಯಾರ ಸೇರದಂಥ ಅಧಮ ನರನು
ಬೆಳೆಯ ಹೊಲದಲಿಟ್ಟ ಬೆದರು ಬೊಂಬೆಯ ಪೋಲ್ವ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹೇಮ ಮೃಗವಿಳೆಯಲಿ ಇಲ್ಲೆಂದು ಅರಿಯದೆ
ರಾಮ ಬಿಟ್ಟು ಹೋದ ರಮಣಿಯನ್ನು
ದೈವವಾದರೇನು ಧನವನ್ನೆ ಬಯಸುವ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಇಲ್ಲದ ಬಡವಂಗೆ ಏನು ಮೇಲ್ಮಾಡಲು
ಕಾಸಿನಷ್ಟು ಫಲವು ಕಲೆತು ಬರದು
ಇದ್ದವಂಗೆ ಫಲವು ಇಮ್ಮಡಿ ಕಲೆವುದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಇಹದಿ ಸುಖವು ಪಡಲು ಹೇಮತಾರಕವಿದ್ಯೆ
ಪರದಿ ಸುಖವು ಪಡಲು ಬ್ರಹ್ಮವಿದ್ಯೆ
ಮಿಕ್ಕ ವಿದ್ಯೆಗಳವು ಮಿಥ್ಯೆ, ಮೂಢರಿಗುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಈಜು ಬರಲು ಆಳವೆಣಿಸುವ ಕೆಲಸಿಲ್ಲ
ಸಾವಿಗಿಂತ ದುಃಖವಾವುದಿಲ್ಲ
ಕೊಳೆಯ ಗೋಸಿಗಿಂತ ಕೊಂಚವಾವುದು ಇಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ವಿಶ್ವದಾಭಿ ರಾಮ ವೇಮ ತಿಳಿಯೊ 133

ವೇ॥ ಕರ್ಣನೆ ವರದಾತ, ಘನರಾರು ಇಲ್ಲೆಂದು
ದಾನಶೀಲನೆಂದು ಮಾನಪಡೆದ
ಧನವೆ ಕರ್ಣನನ್ನು ದಾತನ ಮಾಡಿತು
ವಿಶ್ವದಾಭಿ ರಾಮ ವೇಮ ತಿಳಿಯೊ 134

ವೇ॥ ಕಾಮಿನಿಯರ ಕಂಡು, ಕಡು ಅರ್ಥವನು ಕಂಡು
ಸಾರ ರುಚಿಗಳಲ್ಲಿ ಸವಿಯ ಕಂಡು
ಅಯ್ಯರಾದರೇನು ಆಶೆಯ ಮಾಡರೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 135

ವೇ॥ ಚಿನ್ನವಿದ್ದ ಮನುಜ, ಚೆನ್ನಿಗ ಬಲಭೀಮ
ನಾಗಿ ಮೆರೆವದುಂಟು ಅಚ್ಚರೇಕೆ
ಹೇಮವಿಲ್ಲದವನು ಹೆಡ್ಡರ ಗುರಿಗಂಡು
ವಿಶ್ವದಾಭಿ ರಾಮ ವೇಮ ತಿಳಿಯೊ 136

ವೇ॥ ತಾಯಿ ಮಕ್ಕಳ, ಬಡಿದಾಟಕಿಳಿಸುವಂಥ
ಹಣ ಸುಖ ತರದೆಂದು ಅನ್ನುತಿಹರು
ಧನವ ಗಳಿಸದಿರಲು ತನಗೆ ನಡೆವದೆಂತು
ವಿಶ್ವದಾಭಿ ರಾಮ ವೇಮ ತಿಳಿಯೊ 137

ವೇ॥ ತಿಳಿದು ಸುಳ್ಳು ನುಡಿವ ತಿಳಿಗೇಡಿ ಮನೆಯಲ್ಲಿ
ಇರುವಳೇನು ಲಕ್ಷ್ಮಿಯಿರುವದಿಲ್ಲ
ಬಿರುಕು ಕೊಡದಿ ನೀರು ಹರಿದು ಪೋಗುವ ರೀತಿ
ವಿಶ್ವದಾಭಿ ರಾಮ ವೇಮ ತಿಳಿಯೊ 138

ಭಂಡ ವೈಶ್ಯವರನ ವಸ್ತು ನೀಚರ ಪಾಲು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಧನವಿರದೊಡೆ ಕುಲದ ಘನತೆಯು ಕಿರಿದಕ್ಕು
ಧನವಿರದೊಡೆ ಯಶವು ತರಿದು ತೊಲಗು
ಧನವಿರದೊಡೆ ಶುಚಿಗೆ ಮನವು ತಾ ನಿಲ್ಲದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸಿರಿಯುಇರದೆ ಸುಖವು ಧರೆಯಲಿಮತ್ತಿಲ್ಲ
ಅರಿವು ಇರದೆ ಸುಖವು ಪರದಲಿಲ್ಲ
ಎರಡು ಇಲ್ಲದಾಗ ಎರಡರಲ್ಲಿಯು ಇಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಚೊಕ್ಕ ಜಾತಿಹೀನ ರೊಕ್ಕದಿಂ ಶೋಭಿಪ
ಸಿರಿಯು ಇರದೆ ಕುಲಕೆ ಹಿರಿಮೆಯಿಲ್ಲ
ಹಿರಿಯ ಜಾತಿಗಿಂತ ಸಿರಿಯ ಜಾತಿಯೆ ಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪ್ರಾಪ್ತಿ ಇರುವ ತಲದಿ, ಫಲವಿಡುವನು ದೈವ
ಪ್ರಾಪ್ತಿಯಿಲ್ಲದಾಗ ಫಲವದಿಲ್ಲ,
ಪ್ರಾಪ್ತಿಯಿರದೆ ಚಿನ್ನ, ಪರಮಾತ್ಮ ಕೊಡುವನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪೂರ್ವ ಜನ್ಮದಲ್ಲಿ ಪುಣ್ಯವ ಮಾಡದ
ಪಾಪಿ ತಾ ದನವನು ಪಡೆಯಲಾರ

ಆ॥ವೆ॥ ಬಡತನದಲಿ ನೋಡು ಬಂಧು ಜನರ ಗುಣ
ಭಯದ ವೇಳೆ ನೋಡು ಬಂಟನ ಗುಣ
ಕಾಸು ಇಲ್ಲದಾಗ ಕಾಣು ಹೆಣ್ಣಿನಗುಣ
ವಿಶ್ವದಾಭಿ ರಾಮ ವೇಮ ತಿಳಿಯೊ 145

ಆ॥ವೆ॥ ಬಡತನವೆನು ಕಿಚ್ಚು, ಸುಡುವ ಕಾಡಿನ ಕಿಚ್ಚು
ತನ್ನವರಿಗೆ ಕೇಡು ತನಗೆ ಕೇಡು
ಮನದಲಿ ಬಡತನವ ನೆನೆವುದೇ ಪಾಪವು
ವಿಶ್ವದಾಭಿ ರಾಮ ವೇಮ ತಿಳಿಯೊ 146

ಆ॥ವೆ॥ ಬಡವನಾದವಂಗೆ ಬಂಧುಗಳಾರಿಲ್ಲ
ಬಡವನಾದವಂಗೆ ಪರವು ಇಲ್ಲ
ಬಡವನಾದವಂಗೆ ಪ್ರಾಭವದುಳುವಿಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 147

ಆ॥ವೆ॥ ವಾಸವಂಗೆ ವಾಸ ಬಂಗಾರದಾ ಬೆಟ್ಟ
ಆದರೇನು ಅವಗೆ ಆಶೆಬಿಡದು
ಕನಕ ಕುಂಡಲಗಳ ಕರ್ಣನ ಬೇಡನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 148

ಆ॥ವೆ॥ ಮನೆಯಲಿರುವ ಧನವು ತನಗಿರಲೆನ್ನುತ
ಮಣ್ಣಲಿ ಮರೆಮಾಳ್ಪ ಮಂಕುಪ್ರಾಣಿ
ಒಯ್ಯಲಾರ ಹಿಂದೆ ಒಂದು ಕಾಸಾದರು
ವಿಶ್ವದಾಭಿ ರಾಮ ವೇಮ ತಿಳಿಯೊ 149

ಆ॥ವೆ॥ ನೋಡಿ ನೋಡಲಾರ ನುಡಿಯನು ಬಾಯ್ಬಿಚ್ಚಿ<br>
ಕೇಳಿ ಕೇಳಲಾರ ಕೃತಕಬಿಡದೆ<br>
ಕುನ್ನಿ ಧನಿಕಗಿದುವೆ ಸನ್ನಿಪಾತದ ಬೇನೆ<br>
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸಿಹಿಗಳಲ್ಲಿ ಪ್ರಾಣ ಸಿಹಿಯಾದವಸ್ತುವು<br>
ಪ್ರಾಣಕಿಂತ ಚಿನ್ನ ಬಹಳ ಸಿಹಿಯು<br>
ಚಿನ್ನಕಿಂತ ಹೆಚ್ಚು ಚೆಲುವೆಯಾಡುವ ನುಡಿ<br>
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸುತರು ಧನವಿರದೊಡೆ, ಅತಿನಿಂದೆ ಮಾಳ್ಪರು,<br>
ಸತಿಯು ಧನವಿರದೊಡೆ, ಶಾಂತದಿರಳು,<br>
ಹಣವಿರದೊಡೆ, ತಾಳ್ಮೆ ಯಾರಿಗೂ ಬಾರದು,<br>
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅಧಮನಾದ ನರನು ಹಣದಿ ತಾಮೆರೆಯಲು<br>
ಅವನ ಮಾತು ನಡೆವುದವನಿಯಲ್ಲಿ<br>
ಅರಸನಾಜ್ಞೆ ಕವಡೆ ಮೆರೆಯವೇ ಹಣದಂತೆ<br>
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪಾಲ ಕಡಲಿನಲ್ಲಿ ಪವಡಿಸಿದಾ ಸ್ವಾಮಿ<br>
ಗೊಲ್ಲರ ಮನೆಹಾಲು ಕೋರಲೇಕೆ ?

ಮುದ್ದಿನಸವಳಿಗೇಕೆ ಮುದುಕ ಗಂಡ ?
ತಂಗುಳುಳಿಯದ ಮನೆ ತಾರದು ಯಶವನ್ನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹೆಣ್ಣು ಹೊನ್ನುಗಳಿಗೆ ಇಡಬೇಕು ಭದ್ರತೆ
ಇಡದಿರುವವ ಜೀವ ಬಿಡಲೆಬೇಕು
ಭದ್ರತೆಯನು ಬಿಡಲು ಛಿದ್ರವೇ ಸಂಸಾರ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸಾಲವಿಲ್ಲದವನು ಸಾರ ಸಂಪನ್ನನು
ತಪ್ಪು ಮಾಡದವರು ಧರೆಯಲಿಲ್ಲ
ಘನತೆಯಿರದ ಬುದ್ಧಿ ಕರಗುತ ಕಿರಿದಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆಶೆಯಿಂದ ಧನವ ಆರ್ಜಿಸಲೇತಕೆ
ಮಣ್ಣು ಕೆಳಗೆ ಯಿಟ್ಟು ಮರೆಯಲೇಕೆ ?
ಧನವು ಹೋದ ಬಳಿಕ ಧರ್ಮ ಮಾಡುವದೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ವನಿತೆಯಲ್ಲಿ ಆಶೆ, ಕನಕದ ಮೇಲಾಶೆ,
ಯಿಲ್ಲದವನು ಧಾತ್ರಿಯ್ಯಲ್ಲಿ ಇಲ್ಲ
ತಪ್ಪಿಯಿದ್ದರವನು ತಾಕಾಣ ಜನರಿಗೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ದಿನಕೆ ಮೂರುಸಾರಿತಿಂದು ನಿದ್ರೆಯ ಮಾಡಿ

ಧನಿಕಗೆಲ್ಲ ಜನರು [illegible]
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಧನವು ಇಲ್ಲದಿರಲು ಧೈರ್ಯವಿರದುನಿಂತು
ಧೈರ್ಯ ಹುಟ್ಟದಿರಲು ಧನವು ಸಿಗದು
ಧನವು ಧೈರ್ಯ ಬೇಕು ಧರೆಯಲ್ಲಿನರರಿಗೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹರಿಯೆ ಎನ್ನಬಹುದು ಹರನೆನ್ನಲು ಬಹುದು
ಒಳ್ಳಿಗನನು ಕಂಡು ಒಪ್ಪ ಬಹುದು
ಕಾಸು ಬಿಚ್ಚಿ ಕೊಡಲು ಕೈಯೆದ್ದುಬಾರದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಧನವೆ ಇಲ್ಲದಂಥ ತಂದೆಯ ಗರ್ಭದಿ
ಭಾಗ್ಯಪುರುಷನೊಬ್ಬ ಭರದಿ ಹುಟ್ಟಿ
ಬಹಳ ಧನವ ಗಳಿಸಿ ಭದ್ರಗಳೊದಗಿಪ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪಾಪ ಪುಣ್ಯಗಳನು ಪಶುಪಾಲನರಿವನೇ
ಅವನಿಯಲ್ಲಿ ಯೋಗಿ ಅರಿಯಬಲ್ಲ
ಹೊಂದಿಕೆಯಲಿ ಹೆಚ್ಚು ಹೊನ್ನುಗಳಿಸೆ ಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ನಲ್ಲ ಗಳಿಸುವ ಹಣ ನಲ್ಲೆಗೆ ಬಹುಬಲ
ಗಳಿಕೆಯಿರದ ಗಂಡ ಕಾಸು ಬಾಳ
[illegible]

ಆ॥ವೆ॥ ಅಲ್ಪ ಬುದ್ಧಿಯವಗೆ ಅಧಿಕಾರ ಕೊಟ್ಟರೆ
ಹಿರಿಯರಾದವರನ ಎತ್ತಿಯೆಸೆವ
ಕೆರ ಕಡಿಯುವ ನಾಯಿ ಯರಿವುದೇ ಸಿಹಿ ಕಬ್ಬು ?
ವಿಶ್ವದಾಭಿ ರಾಮ ವೇಮ ತಿಳಿಯೊ 169

ಆ॥ವೆ॥ ಅಲ್ಪ ನುಡಿವ ಸತತವಾಡಂಬರವು ತುಂಬಿ
ಸುಜನ ನುಡಿವ ತಂಪು ಸೊಂಪು ತುಂಬಿ
ಕಂಚು ಮೊಳಗಿದಂತೆ ಕಾಂಚನ ಮೊರೆವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 170

ಆ॥ವೆ॥ ಅನ್ನಕೆ ಗತಿಯಿಲ್ಲದಾಗಿ ಕೂತವರಿಗೆ
ಅಂಗನೆಯರ ಮೇಲೆ ಆಶೆಯಿರದು
ಅನ್ನದ ಮದದಿಂದ ಅಂಟೆಲ್ಲ ಮದಗಳು
ವಿಶ್ವದಾಭಿ ರಾಮ ವೇಮ ತಿಳಿಯೊ 171

ಆ॥ವೆ॥ ಈಡಿಗನ ಮನೆಯಲಿ ಇರುತ ಹಾಲ್ಕುಡಿದರೆ
ಹೆಂಡ ಕುಡಿದನೆಂಬರೆಲ್ಲ ಜನರು
ನಿಲ್ಲ ಬಾರದಲ್ಲಿ ನಿಲ್ಲಲು ದೂರುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ 172

ಆ॥ವೆ॥ ಕಬ್ಬಿಣವು ಮುರಿದರೆ ಕಾಯಿಸಿ ಕಮ್ಮಾರ
ಮುರುಕು ಹಚ್ಚಬಲ್ಲ ಮುಂದಿನಂತೆ
ಮನ ಮುರಿದರೆ ಅಚ್ಚು ಮತ್ತಾಗಲಾರದು
ವಿಶ್ವದಾಭಿ ರಾಮ ವೇಮ ತಿಳಿಯೊ 173

ಆ॥ವೆ॥ ಕಾಶಿ ತಲುಪಲಿಕ್ಕೆ ಕಾಸು ಕೂಡಿಡಲೇಕೆ

ಸರಳ ತಪ್ಪಿ ಮಾತು ವಿರಳ ಬೇಡ
ಸಮಯವರಿಯದವನು ಸರಸನಾಗುವನೆಂತು ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕುಲದಲೊಬ್ಬ ನೀಚ ಗುಣದವನಿದ್ದೊಡೆ
ಕುಲವು ಕೆಡುವದವನ ಗುಣಗಳಿಂದ
ಕಬ್ಬಿನ ತುದಿ ತೆನೆಯು ಕಾಣಿಸಿಕೊಂಡಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕೊಂಡೆಗ ಮರಣಿಸಲು ಕಂಡು ಪೋಗುವರಷ್ಟೆ
ಬಂಧವಿರದು, ದುಃಖ ಭಾರವಿರದು,
ತೋಳ ಸತ್ತರೆ ಕರು ದುಃಖ ಪಡುವುದೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗಂಡ ಶಿಲೆಯನೊಡೆದು ತುಂಡು ಮಾಡಬಹುದು
ಪರ್ವತಗಳ ಹಿಟ್ಟು ಬಡಿಯಬಹುದು
ಕಠಿನ ಹೃದಯನ ಮನ ಕರಗಿಸಲಳವಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಖುಲ್ಲ ಬುದ್ಧಿಯವನ ಕೂಡಿ ಮಾತಾಡಲು
ಮರ್ಮ ತಿಳಿಸಲು ಮನ ಮಾಡಬೇಡ
ಚೂರರಿತರೆ ಅವನು ಸಾರುವನೂರೆಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗುಹೆಗಳಲ್ಲಿ ಇರಲಿ, ಗುಡಿಗಳಲ್ಲೆ ಇರಲಿ,

ಮೊಳಗುತ ಹರಿಯುವುದು ಹೊಲಸು ಹಳ್ಳ
ಅಧಿಕನ ಸಹನತೆಯು ಅಧಮಂಗೆ ಬಾರದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತನಗೆ ಅನ್ನವಿಟ್ಟು ತನ್ನ ಸಂರಕ್ಷಣೆ
ಮಾಡುವವನ ನಾಯಿ ಮರೆವುದಿಲ್ಲ
ಮೇಲು ಮರೆಯುವ ಖಳ, ಹೋಲನು ಶುನಕಂಗೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತೊನೆಯದೆ ಹರಿಯುವವು ತುಂಬಿದನದಿಗಳು
ಹೆಚ್ಚು ರಭಸತೋರು ಹುಚ್ಚುಹಳ್ಳ
ಅಲ್ಪನಾಡುವಂತೆ ಅಧಿಕ ತಾನುಡಿವನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬೆಂಕಿ ಕರದಿ ಹಿಡಿದು ಶಾಂಕರೀಶ್ವರನನ್ನು
ನಿಂದೆ ಮಾಳ್ಪ ನರರು ನೊಂದು ಕೆಡರೆ
ದಕ್ಷ ಯಜ್ಞದಲ್ಲಿ ತಲ್ಲಣವರಿಯರೇ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬೇರಿಗೆ ಹುಳ ಸೇರಿ ವೃಕ್ಷವ ಕೆಡಹುದು
ಕೆಡಕು ಕ್ರಿಮಿಯು ಸೇರಿ ಕೆಡಹು ಗಿಡವ
ಖುಲ್ಲ ನರನು ಸೇರಿ ಗುಣಿಯನ್ನು ಕೆಡಿಸನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬೇವು, ಹಾಲನೆರೆದು ಪ್ರೀತಿಯಿಂ ಬೆಳೆಸಲು

ನಗ್ನವಾಗಿ ತಿರುಗಿ ನಶಿಸಿ ಪೋಪ
ಕೆಲಸವಾದ ಬಳಿಕ ಕಿರಿಚಿಂದಿಯೇ ಗತಿ
ವಿಶ್ವದಾಭಿ ರಾಮ ವೇಮ ತಿಳಿಯೊ 187

ಆ॥ವೆ॥ ಮಾನ ಹೀನನನ್ನು ಮನೆಯಲಿಟ್ಟುಕೊಳಲು
ಮಾನ ಕಳೆವನೆಂಥ ಮಾನ್ಯನಿರಲಿ
ನೊಣವು ಹೊಟ್ಟೆ ಪೊಕ್ಕು ನೂಕಾಟವಾಡದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 188

ಆ॥ವೆ॥ ಮಾತಿನಲ್ಲಿ ಒಂದು, ಮನದಲ್ಲಿ ಮತ್ತೊಂದು
ಒಡಲಿನ ಗುಣಬೇರೆ ನಡತೆಬೇರೆ
ಎಂತು ಮುಕ್ತನಪ್ಪ ಇಂತು ತಾ ನಿದ್ದೊಡೆ,
ವಿಶ್ವದಾಭಿ ರಾಮ ವೇಮ ತಿಳಿಯೊ 189

ಆ॥ವೆ॥ ಅಂತರಂಗದಲ್ಲಿ ಅಪರಾಧಗಳ ಮಾಡಿ
ಸುಗುಣಿಯಂತೆ ಇರುವ ಚೋರನನ್ನು
ಪರರು ಅರಿಯದಿರಲು ಪರಮಾತ್ಮನರಿಯನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 190

ಆ॥ವೆ॥ ರಾಮನಾಮಪಠನೆ ತಾ ಮಾಡಿ ವಾಲ್ಮೀಕಿ
ಬೇಡನಾದರವನು ವಿಪ್ರನಾದ
ಕುಲವು ದೊಡ್ಡದಲ್ಲ ಗುಣವೇ ಪ್ರಧಾನವು
ವಿಶ್ವದಾಭಿ ರಾಮ ವೇಮ ತಿಳಿಯೊ 191

ಆ॥ವೆ॥ ಸಲ್ಲದ ಗುಣದವಗೆ ಮುಲ್ಲೆಯ ಹಣಕೊಟ್ಟು

ಸಲ್ಲದವನು ಎಂದು ಜನ ತಿಳಿವರು
ತಾಳೆ ಬುಡದಿ ತಂಗಿ, ತಾ ಹಾಲು ಕುಡಿದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ 193

ವೆ॥ ಸಿರಿಯಕಾಲಮದದಿ ಸೇರಆರ್ತನ ಕಂಡು
ಇಲ್ಲದ ದಿನ ಮೊದಲೆ ಇಲ್ಲ ಕೊಡಲು
ಸಿರಿತನ ಬಡತನವು ಇರದ ಕಾಲವದುಂಟೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 194

ವೆ॥ ಹಳೆಯ ಬೇವಿನ ಮರ ತಳ ಕೊನೆಯೆನ್ನದೆ
ಬರುವುದೌಷಧಕ್ಕೆ ಧರಣಿಯಲ್ಲಿ
ನಿರ್ದಯಾತ್ಮನಾದ ನೀಚನೇತಕು ಬಾರ
ವಿಶ್ವದಾಭಿ ರಾಮ ವೇಮ ತಿಳಿಯೊ 195

ವೆ॥ ಹಾಲು ಜೇನು ಬೆರಸಿ ಹಾವಿಗೆ ಕುಡಿಸಲು
ತನ್ನ ಬಿಡುವುದಿಲ್ಲ ಬೆನ್ನ ಹತ್ತು
ಕಪಟಿ, ಮೋಸದ ಗುಣ ಕರ್ತವ್ಯವೆನ್ನುವ
ವಿಶ್ವದಾಭಿ ರಾಮ ವೇಮ ತಿಳಿಯೊ 196

ವೆ॥ ಹಾಲು ಬೆಲ್ಲ ಬೆರಸಿ, ಹಾಕ್ಕಹಿ ಪಾಪರ
ಹಣ್ಣುಗಳ ಕುದಿಸಲು, ಉಣ್ಣ ಬರವು,
ಕುಟಿಲ ಮಾನವರಿಗೆ ಗುಣವೆಂತು ಬರ್ಪುದು ?
ವಿಶ್ವದಾಭಿ ರಾಮ ವೇಮ ತಿಳಿಯೊ 197

ವೆ॥ ಹಿರಿಕಪಿಯನು ತಂದು ಜರಿ ಸೀರೆಯನುಡಿಸಿ

ಚಾಡಿ ಹೇಳ್ವ ಪಾಪ ಜಾತಿಯವನು
ಚಾಡಿ ಕೋರಗೆಂತು ಸಾಯುಜ್ಯ ಸಿಗುವುದು
ವಿಶ್ವದಾಭಿ ರಾಮ ವೇಮ ತಿಳಿಯೊ 199

ಆ॥ವೆ॥ ಆಣೆಯಿಡಲು ಕಲಿತು ಅತಿಮೋಸಗಳ ಮಾಡಿ
ತುತ್ತಿಗಾಗಿ ದೋಷ ವೃತ್ತಿ ಬಿಡದ
ದೋಷಕಾರಿಗೆಂತು ದೊರೆವುದು ಕೈವಲ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 200

ಆ॥ವೆ॥ ಹೆಚ್ಚಳದರಸೋರ್ವ ಹೀನನಂಪಾಲಿಸೆ
ಅವನ ಮಾತು ನಡೆವುದವನಿಯಲ್ಲಿ
ಗಣಕರಿಚ್ಛೆಸಿದರೆ ಕವಡೆಗಳಾಡವೇ
ವಿಶ್ವದಾಭಿ ರಾಮ ವೇಮ ತಿಳಿಯೊ 201

ಆ॥ವೆ॥ ಆದಿ ಕಾರಣಗಳ ಅಲ್ಪನೇನರಿವನು
ತನಗೆ ಹೇಳಬರದು ತಪ್ಪು ಹಿಡಿವ
ಕೆಡಹಲರಿತ ನಾಯಿ ಅಡಕಲೇರಿಸುವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 202

ಆ॥ವೆ॥ ಕುಹಕದಿಚ್ಛೆತೋರಿ ಕುಮುದ ಲೋಚನೆಯರು
ಮತ್ಸರ ಗುಣವಿರದ ಮಾನ್ಯನಲ್ಲಿ
ಸೇರಿ ನೈಚ್ಯ ಬಿಡದೆ ದೂರುತಲಿರುವರು
ವಿಶ್ವದಾಭಿ ರಾಮ ವೇಮ ತಿಳಿಯೊ 203

ಆ॥ವೆ॥ ಕಳ್ಳತನಗಳಿಂದ ಕಡು ಮೋಸಗಳ ಮಾಡಿ

ಮನವು ಭೂತದಂತೆ ಕುಣಿಯು ತಿರಲು
ಶಿವನ ಭಕ್ತ ನೆನಲು ಸಿಗ್ಗೇಕೆ ಬಾರದು
ವಿಶ್ವದಾಭಿ ರಾಮ ವೇಮ ತಿಳಿಯೊ 205

ಆ॥ವೆ॥ ಕಡಿಯ ಬರುವ ಹಾವು ಹೆಡೆಯೋರೆ ಮಾಳ್ಪದು
ಕೆಡಿಸುವವನು ಮಾಳ್ಪ ಗೆಳೆಯತನವ
ಕೊಲೆ ಬಗೆಯುವ ಅರಸ ಸಲಿಗೆಹೆಚ್ಚನುಮಾಳ್ಪ
ವಿಶ್ವದಾಭಿ ರಾಮ ವೇಮ ತಿಳಿಯೊ 206

ಆ॥ವೆ॥ ಪರರು ಓದುತಿರಲು ನಿರಸನಮತಿಯಿಂದ
ಕೂಗುವ ಬರಿಮಾತು ಕೊಬ್ಬಿ ಕೂಳ
ಅಂಥ ನೀಚನನಡೆಯರಸುವದೇ ದೋಷ
ವಿಶ್ವದಾಭಿ ರಾಮ ವೇಮ ತಿಳಿಯೊ 207

ಆ॥ವೆ॥ ಪರರ ನಿಂದೆಯಿಂದ ಬಹುಪಾಪ ಸಂಚಯ
ಬಿಡದದೆಂದು ನಿನ್ನ ವಿಶ್ವದಲ್ಲಿ
ಪರನು ಪರನು ಅಲ್ಲ ಪರಮಾತ್ಮನೇ ಸರಿ
ವಿಶ್ವದಾಭಿ ರಾಮ ವೇಮ ತಿಳಿಯೊ 208

ಆ॥ವೆ॥ ಸತ್ಪುರುಷರ ಸಂಗ ಸಾಕೆನ್ನಬಾರದು
ಪ್ರಕೃತಿಯರಿಯದಿರಲು ಭಕ್ತಿಯಿಲ್ಲ
ಭ್ರಷ್ಟಗಿದು ವಿರುದ್ಧ ಭಕ್ತನಾಗುವನೆಂತು
ವಿಶ್ವದಾಭಿ ರಾಮ ವೇಮ ತಿಳಿಯೊ 209

ಆ॥ವೆ॥ ಚೊಕ್ಕ ವಿದ್ಯೆಗಳಲಿ ಸೂಕ್ತಿಗಳರಿಯದೆ

ಆ॥ವೆ॥ ಅನ್ಯರಿಗೆ ಒದಗಿದ ಆಪತ್ತು ತನದೆಂದು
ಭಾವಿಸುವನು ಸುಜನ ವಸುಧೆಯಲ್ಲಿ,
ದಯವಿರುವ ಮನುಜನು, ದೈವ ಸಮಾನನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅನ್ಯ ಕಾಂತೆಯರನು, ಅನ್ಯರ ಹಣವನ್ನು,
ಕಂಡು ಆಶೆ ಪಡದೆ, ಘನತೆ ಯಿಂದ,
ಅನ್ಯರಾರ್ತಿಯನ್ನು, ಅಳಿಸುವನೇ ಪ್ರಾಜ್ಞ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅನ್ಯ ಕಾಂತೆಯರಿಗೆ ಅಣ್ಣನಾಗಿರಬೇಕು,
ಪರಧನ ವಿಷವೆಂದು ಅರಿಯಬೇಕು,
ಪರರು ಕೋಪಿಸಿದರೆ, ಬಲು ಶಾಂತದಿರಬೇಕು,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅತಿ ಹಿತಕರವಾಗಿ ಆಡಿದ ಮಾತಿಗೆ,
ಸಂತಸವ ಪಡುವರು ಸಾಧುಜನರು,
ಅಧಿಕ ಮಾತನಾಡಿ ಆಯಾಸ ಪಡಲೇಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅಮಲವಾದ ನುಡಿಯೆ ಅಭಿಷೇಕ ಜಲವೆಂದು,
ತನುವಿದೆ ಗುಡಿಯೆಂದು, ತಾಳ್ಮೆ ಹಿಡಿದು,
ಆತ್ಮದಿ ಶಿವನರಿಸುವಾತನೆ ಶಿವಯೋಗಿ,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆತ್ಮದಲ್ಲಿ ಶಿವನ ಅನುದಿನ ಕಾಣುತ್ತ

ಭಕ್ತಿ ತುಂಬಿ ಇರುವ ಪ್ರಾಜ್ಞರಾದ ಜನರು
ವಿಶ್ವದಾಭಿ ರಾಮ ವೇಮ ತಿಳಿಯೊ 217

ವೆ॥ ಕೊಲ್ಲಲರುಹನಾದ ಕೂಳಕೈಸಿಕ್ಕರೆ
ಕೇಡು ಮಾಡಲು ಮನ ಮಾಡಬೇಡ
ಒಳಿತು ಅವಗೆ ಮಾಡಿ ಹೋಗೆಂದರೇ ಸಾಕು
ವಿಶ್ವದಾಭಿ ರಾಮ ವೇಮ ತಿಳಿಯೊ 218

ವೆ॥ ಮೆಣಸು ನೋಡುವದಕೆ ಮೇಲೆ ಕಪ್ಪಗಿಹುದು
ಕಡಿಯಲು ರುಚಿ, ಚುರುಕು, ಕಾಣಲಹುದು
ಸಜ್ಜನರ, ವರಗುಣ ಸಾರವಿಂತಿರ್ಪುದು
ವಿಶ್ವದಾಭಿ ರಾಮ ವೇಮ ತಿಳಿಯೊ 219

ವೆ॥ ಕಾಣುವರು ಮುನಿಗಳು ಕಡುಹೀನರಂತೆಯೇ,
ಅವರ ತಿರುಳ್ ನುಡಿಯೆ ಅಮರ ಗಿರಿಯು
ಒಳಗೆಯಿರುವ ಜ್ಞಾನ, ಹೊಳಪು ಮಹತ್ತದು
ವಿಶ್ವದಾಭಿ ರಾಮ ವೇಮ ತಿಳಿಯೊ 220

ವೆ॥ ಖುಲ್ಲರ ಗೆಳೆತನವು ಕೂಳಂಗೆ ಹರ್ಷವು,
ಸಮ್ಮತವದು ಅಲ್ಲ ಸಜ್ಜನರಿಗೆ
ಸಗಣಿ ತಿಂದ ಹುಳವು ಸಕ್ಕರೆಯರಿವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 221

ವೆ॥ ಗುರುವು ಬರುತಲಿರಲು, ಕುಳಿತು ತಾನೇಳದ
ದೂರ್ತ ಜನಕೆ ಮುಕ್ತಿ ದೊರೆವುದೆಂತು.

ಸುಮಗಳ ಹುಡಿ ಸುಳಿವು ಭ್ರಮರವರಿಗು
ಪರಮ ಯೋಗಿಯನ್ನು ಭಕ್ತನೇ ಅರಿವನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತಂದೆಗಿಂತ ಸುಗುಣಿ ತನಯನಾಗಿದ್ದೊಡೆ
ಹಿರಿಯ ಕಿರಿಯರೆಂದು ಎಣಿಸರಾರು
ವಾಸುದೇವನೆನದೆ ವಸುದೇವನೆಂಬರೇ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತಪ್ಪನೆಣಿಸುವವರು ತಂಡೋಪತಂಡವು
ಇಳೆಯ ಜನರಿಗೆಲ್ಲ ಇಹುದು ತಪ್ಪು
ತಪ್ಪನೆಣಿಸುವವರು ತಮ್ಮ ತಪ್ಪರಿಯರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಧಾರ್ಮಿಕನಿಗೆ ಹೊರತು ಧರ್ಮವು ಕಾಣದು
ಕಷ್ಟ ಜೀವಿಗೆಂತು ಕಾಣಿಸುವದು
ನೀರೊಳಗಿಳಿಯದಿರೆ, ನಿಜದಾಳ ತಿಳಿಯದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ನೀಚ ಗುಣಗಳಿಂದ ನಿರ್ಮೂಲವಪ್ಪುದು
ಕೊರತೆಯಿರದು ಸುಜನ ಗೋಷ್ಠಿಯಿಂದ,
ಗಂಧಲೇಪಕೆ ಮೆಯಿಕಂಪು ಅಡಗಿದಂತೆ,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪೂಜೆಗಿಂತ ಬುದ್ಧಿ ಪೂರ್ಣತೆಯೇ ಲೇಸು,

ಬಿಡುತಿದನ್ನುವವಗೆ ಬಂತು ಸಿದ್ದಿ
ಮೌನ ಪಾಲಿಸುವವ ಮಹಿಯಲುತ್ತಮನಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 229

॥ವೆ॥ ಮರೆಯಬೇಕು, ಪಾಪ ಮಯವಾದ ಕರ್ಮವು,
ಮರೆಯಬೇಕು, ಜಗಳ ಪರರ ತಪ್ಪು,
ಮರೆಯದೆ ಇರಬೇಕು, ಧರೆಯಲ್ಲಿ ಉಪಕಾರ,
ವಿಶ್ವದಾಭಿ ರಾಮ ವೇಮ ತಿಳಿಯೊ 230

॥ವೆ॥ ಮಾತು ಮರ್ಮ ತಿಳಿದು ಮಾತಾಡ ಕಲಿತರೇ
ಹಿರಿಯ ಕಿರಿಯ ತನವನೆಣಿಸಲೇಕೆ ?
ಕಿರಿಯನ ಕರದೀಪ ಹೊರ ಚಿಮ್ಮದೇ ಕಾಂತಿ ?
ವಿಶ್ವದಾಭಿ ರಾಮ ವೇಮ ತಿಳಿಯೊ 231

॥ವೆ॥ ಸತ್ಯವಮರಿ ಇರಲು ಜ್ಞಾನವು ಸಮವುಂಟು
ಜ್ಞಾನವಮರಿ ಇರಲು ಸತ್ಯವಿಹುದು
ಜ್ಞಾನ ಸತ್ಯಗಳವು ಸಮವಿರೆ ದ್ವಿಜನವ
ವಿಶ್ವದಾಭಿ ರಾಮ ವೇಮ ತಿಳಿಯೊ 232

॥ವೆ॥ ಸತ್ಯವನ್ನು ಹೊಂದಿ ಜಗದಲಿದ್ದವರಿಗೆ
ಜ್ಞಾನ ಕೂಡಿರುವದು ಸತತ ನೆಲೆಸಿ
ಜ್ಞಾನವೇ ಒದಗಲು ಸಮಧಿಕ ದ್ವಿಜನವ
ವಿಶ್ವದಾಭಿ ರಾಮ ವೇಮ ತಿಳಿಯೊ 233

॥ವೆ॥ ಸಹನವಿಲ್ಲದ ಹೆಣ್ಣು ಸತಿಯಾಗಿ ಫಲವೇನು ?

ವಿಶ್ವದಾಭಿ ರಾಮ ವೇಮ ತಿಳಿಯೊ 235

ಆ॥ವೆ॥ ಸೌಟಿನಷ್ಟೆ ಸಾಕು ಸಾಧು ಗೋವಿನ ಹಾಲು
ಕತ್ತೆ ಹಾಲದೇಕೆ ಘಟದ ತುಂಬ
ಭಕ್ತಿ ಬೆರತ ಅನ್ನ, ಬಾಯಿ ತುತ್ತೇ ಸಾಕು
ವಿಶ್ವದಾಭಿ ರಾಮ ವೇಮ ತಿಳಿಯೊ 236

ಆ॥ವೆ॥ ಸಾತ್ವಿಕ ಗುಣವರಿತು ಸಜ್ಜನರಾದೊಡೆ
ಬಡವರಾದರೇನು ಪೊಡವಿಯಲ್ಲಿ
ಪುಣ್ಯ ಫಲವು ಬೆಳೆದು ಪೂಜಿಸಲ್ಪಡುವರು
ವಿಶ್ವದಾಭಿ ರಾಮ ವೇಮ ತಿಳಿಯೊ 237

ಆ॥ವೆ॥ ಕೋಪದಿಂದ ಮಾನ ಲೋಪವಾಗುವದುಂಟು
ಕೋಪದಿಂದ ಬಹಳ ತಾಪವುಂಟು
ಕೋಪವಳಿಸಲವಗೆ ಕೋರ್ಕೆಗಳವು ತೀರು
ವಿಶ್ವದಾಭಿ ರಾಮ ವೇಮ ತಿಳಿಯೊ 238

ಆ॥ವೆ॥ ಸುಗುಣಿಗೆ ಉಪಕಾರ ಉಗುರಷ್ಟು ಮಾಡಲು
ಗುಡ್ಡವಹುದು ಅವನ ಗುಣಗಳಿಂದ
ಗುಡ್ಡದಷ್ಟು ನೆರವು ಗುಣಹೀನನರಿವನೇ
ವಿಶ್ವದಾಭಿ ರಾಮ ವೇಮ ತಿಳಿಯೊ 239

ಆ॥ವೆ॥ ನೆರವು ತಪ್ಪಲು ನರ, ನಿರತ ಧಾರ್ಮಿಕನನ್ನು
ಸೇರಬೇಕು ನೆರವು ಸಿಗುವದಲ್ಲಿ,
ಆದರಿಸನೆ ರಾಮ ಆವಿಭೀಷಣನನ್ನು

|ವೆ|| ಹೊಟ್ಟೆ ಕಿಚ್ಚಿನಿಂದ, ಉರುಕಾಮ ಶಿಖಿಯಿಂದ,
ಸಿಡುಕು ವಹ್ನಿಯಿಂದ, ಎಡರು ತಡೆದು.
, ಯುಕ್ತ ಮನಸಿನಿಂದ ಉತ್ತಮ ಬಾಳ್ವನು,
ವಿಶ್ವದಾಭಿ ರಾಮ ವೇಮ ತಿಳಿಯೊ 241

|ವೆ|| ಹಕ್ಕಿಗಾಗಿ ಶಿಬಿಯು ತ್ಯಾಗ ಮಾಡಿದ ದೇಹ
ಮೆರೆಯಿತವನ ಯಶವು ಮರೆಯದಂತೆ
ಕೃಪಣಿಯನು ನೆನೆಯರು ಉಪಕಾರಿಯಂದದಿ
ವಿಶ್ವದಾಭಿ ರಾಮ ವೇಮ ತಿಳಿಯೊ 242

|ವೆ|| ಕಾಮ ಮೋಹ ಬಂಧಗಳಿಗೆ ಸಿಕ್ಕಿದ ನರ
ದೇವ ಗುರುಗಳನ್ನು ತಿಳಿಯಲಾರ
ದೇವನ , ಅರಿತವನೆ, ದಿವ್ಯಾತ್ಮನಿಳೆಯಲ್ಲಿ,
ವಿಶ್ವದಾಭಿ ರಾಮ ವೇಮ ತಿಳಿಯೊ 243

|ವೆ|| ವನಿತೆಯೊಲವನಳಿದು, ವೈರಾಗ್ಯರತನಾಗಿ,
ನಿರತ ಶೀಲನಾಗಿ ನೀತಿಗೆಡದೆ,
ಸತ್ಯಪಾಲಿಸುವವ ಸಜ್ಜನನಿಳೆಯಲ್ಲಿ,
ವಿಶ್ವದಾಭಿ ರಾಮ ವೇಮ ತಿಳಿಯೊ 244

|ವೆ|| ಕೋಟಿ ದಾನ ಮಾಡಿ ಕೋಪಿಸಿಕೊಂಡರೆ
ಲೆಕ್ಕವಿಡರು ಜನರು ಸೊಕ್ಕಿನವನ
ಸಾತ್ವಿಕ ಗುಣದಿಂದ ಸಜ್ಜನನಾಗುವ
ವಿಶ್ವದಾಭಿ ರಾಮ ವೇಮ ತಿಳಿಯೊ 245

ವಿಶ್ವದಾಭಿ ರಾಮ ವೇಮ ತಿಳಿಯೊ 247

ಆ॥ವೆ॥ ಗುಣಗಳಿಂದ ಮೆರೆವ ಕುಲಸತಿಯನ್ನಾರು
ನಿಂದೆ ಮಾಡರು ಗುಣ ನಿಯತಿ ಕಂಡು
ಗುಣವು ಇಲ್ಲದವಳು ಕುಲಹೀನಳಲ್ಲವೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 248

ಆ॥ವೆ॥ ಗುಣವು ರೀತಿಯಿರದೆ ಕುಲನಾಶವಾಯಿತು,
ಸ್ತ್ರೀಯರ ನಡೆಯಿಂದ ಸಿಗ್ಗು ಹೋಯ್ತು,
ಸೌಳಿನ ನೆಲದಿಂದ ಜಲವೆಲ್ಲ ಕೆಡುಕಾಯ್ತು
ವಿಶ್ವದಾಭಿ ರಾಮ ವೇಮ ತಿಳಿಯೊ 249

ಆ॥ವೆ॥ ಚಿತ್ತಶುದ್ಧಿಯೊಂದೆ ಶ್ರೇಷ್ಠತಾ ಚಿಹ್ನವು,
ನಿಖಿಲ ಪುಣ್ಯಕಾರ್ಯ ನಿರ್ವಹಣವು,
ಅದುವೆಯಿರದೆ, ಮಾಡಲಳವಲ್ಲ ಯಾರಿಗು,
ವಿಶ್ವದಾಭಿ ರಾಮ ವೇಮ ತಿಳಿಯೊ 250

ಆ॥ವೆ॥ ಹಾಲು ಮೊಸರು, ತುಪ್ಪದನ್ನವನುಣ್ಣುತ,
ಸುದತಿಯರ ಬಯಸದ ಸುಗುಣ ಶೀಲ
ನೊಬ್ಬನಾದರವನೆ ಉತ್ತಮನಿಳೆಯಲ್ಲಿ,
ವಿಶ್ವದಾಭಿ ರಾಮ ವೇಮ ತಿಳಿಯೊ 251

ಆ॥ವೆ॥ ಅನ್ಯರ ಉಪಕಾರವದು ಸ್ವಲ್ಪವಾದರು
ಮಾನನೀಯನದನ ಮರೆಯದಂತೆ
ಮತ್ತು ಪ್ರತಿಯ ಮಾಡಿ ಮರ್ಯಾದೆ ಪಡೆವನು

ವೇ॥ ಅಲ್ಪನಾದರೇನು ಅಧಿಕನಾದರು ಏನು
ತಿಳಿಯ ಹೇಳ್ವ ಕ್ರಮದಿ ತಿಳಿಸಿರುವೆನು
ಈಶನರಿಯದಂತೆ ಎಲೆ ಕೂಡ ಚಲಿಸದು
ವಿಶ್ವದಾಭಿ ರಾಮ ವೇಮ ತಿಳಿಯೊ 253

ವೇ॥ ಇವನ ಕೇಡು ಅಳಿಸಿ ಅವನಿಗೆ ಕೊಡ ದೈವ
ಅವನ ಒಳಿತು ಅಳಿಸಿ ಇವಗೆ ಕೊಡನು
ಒಳಿತು ಕೇಡಿನರಿವ ಖಳರು ತಾವರಿವರೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 254

ವೇ॥ ಎತ್ತಣಿಂದ ಬಂದ ? ಎಲ್ಲಿಗೆ ತಾಂಪೋಪ ?
ನಿದ್ರೆ ಕುರುಹನರಿತು ಭದ್ರವಿರಲು,
ಆತ್ಮ ಹೋಗಿ ಬರ್ಪುದರಿವನಾ ಶಿವಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 255

ವೇ॥ ಎಷ್ಟೊ ಸ್ಥಳಗಳಲ್ಲಿ ಎಲ್ಲೆಲ್ಲೊ ತಿರುಗಲು,
ಅಂಟದು ಫಲ, ಶನಿ ಹತ್ತಿದಾಗ
ಪೊಡವಿ ಬದಲಿಸಿದರೆ ಭೋಕ್ತರು ಹೊಸಬರೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 256

ವೇ॥ ಕಲ್ಲಿನಲ್ಲಿ ಕಪ್ಪೆ ಅಲ್ಲಿಯೇ ಬದುಕಲು
ಅನ್ನ ನೀರು ಅದಕೆ ಹಾಕಿಯಿಟ್ಟ
ಹುಟ್ಟಿಸಿದ ಪರಶಿವ ಹುಲ್ಲು ಮೇಯಿಸುವನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 257

ವೇ॥ ಕಾಣಲಾರರಷ್ಟೆ ಕಲಿಯುಗದಲ್ಲಿರ್ಪ

ವಿಶ್ವದಾಭಿ ರಾಮ ವೇಮ ತಿಳಿಯೊ 259

ಆ॥ವೆ॥ ಕೆಡುಕಿನ ಒಣ ಆಶೆ ಕಡೆಗಾಣಲು ಬಿಡದು
ಎಡರು ತೊಡರುಗಳಿಗೆ ಎಳೆವುದುಂಟು
ಪೊಡವಿ ಜನಕೆ ಭಕ್ತಿ ಪುಟ್ಟಲು ಬಿಡದದು
ವಿಶ್ವದಾಭಿ ರಾಮ ವೇಮ ತಿಳಿಯೊ 260

ಆ॥ವೆ॥ ಕೊಡದಿರುವವನಿಂದ ಕೊಡಿಸುವನಾದೈವ
ಕೊಡುವ ದಾತನಿಂದ ಕೊಡಲು ಬಿಡದು
ಇಡಲು, ಕೆಡಿಸಲಿಕ್ಕೆ ಈಶ್ವರನೇ ಕರ್ತ
ವಿಶ್ವದಾಭಿ ರಾಮ ವೇಮ ತಿಳಿಯೊ 261

ಆ॥ವೆ॥ ಗುಡ್ಡದರಸ ಮಾವ ಗುಡ್ಡದ ಸುತೆ ರಾಣಿ
ಗುಡ್ಡವೆ ಮನೆ, ಹೊನ್ನು ಗುಡ್ಡ ಬಿಲ್ಲು,
ಗುಡ್ಡದಂಥ ದೊರೆಗೆ ಗುಂಡು ರೂಪವೆ ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 262

ಆ॥ವೆ॥ ಧರಣಿ ಪಟ್ಟವನ್ನು ದಶರಥ ರಾಮಂಗೆ
ಕಟ್ಟಿ ಬಯಸಲು ಜಟೆ ಕಟ್ಟಿಬಂತು
ಇಚ್ಛೆ ನಮ್ಮದಷ್ಟೆ, ಈಶ್ವರೇಚ್ಛೆಯೆ ಬೇರೆ
ವಿಶ್ವದಾಭಿ ರಾಮ ವೇಮ ತಿಳಿಯೊ 263

ಆ॥ವೆ॥ ಸಾಟಿಯವರು ನಿನ್ನ ಸಾಧಿಸಲಾರರು
ದೈವ ನಿನ್ನ ಹಿಂದೆ ತಪ್ಪದಿರಲು
ಭಾರತದಲಿ ಇರುವ ಪರಮಾರ್ಥವಿದೆ ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 264

ಸ್ತುತಿಗಳಿಂದ ಜಿಗಿವ ಮತಿಯು ಬೇಡ
ಬರುವ ಲಾಭ, ಲೋಪ, ಪ್ರಾಪ್ತಿಯೆಂದರಿ ನೀನು
ವಿಶ್ವದಾಭಿ ರಾಮ ವೇಮ ತಿಳಿಯೊ 265

ಆ॥ವೆ॥ ನೀರಿನಲ್ಲಿ ಮೊಸಳೆ ನೆಗೆದಾನೆ ಪಿಡಿವುದು,
ಹೊರಗೆ ನಾಯಿಯಿಂದ ಹೊಡೆತ ತಿನ್ನು
ನೆಲೆಯ ಬಲವೆ ಹೊರತು ಬಲವು ತನ್ನದು ಅಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 266

ಆ॥ವೆ॥ ನೌಕೆ ನೀರಿನಲ್ಲಿ ನಯದಿಂದ ಚಲಿಪುದು
ನೆಲದ ಮೇಲೆ ಮೊಳವು ಚಲಿಪುದಿಲ್ಲ
ಸ್ಥಾನ ತಪ್ಪಿದಲ್ಲಿ ಜಾಣನು ಅಸಮರ್ಥ
ವಿಶ್ವದಾಭಿ ರಾಮ ವೇಮ ತಿಳಿಯೊ 267

ಆ॥ವೆ॥ ಪುರುಷಜನ್ಮ ಬಹಳ ಪುಣ್ಯದಿಂಬರುವದು
ಹೆಣ್ಣು ಜನ್ಮ ಪಾಪದಿಂದ ಎಂದು
ಕುರುಡು ಮಾತದೇಕೆ ನರಜನ್ಮವೇ ಶ್ರೇಷ್ಠ
ವಿಶ್ವದಾಭಿ ರಾಮ ವೇಮ ತಿಳಿಯೊ 268

ಆ॥ವೆ॥ ಭೂಮಿಯಲ್ಲಿ ಪುಣ್ಯ ಪುರುಷರಿಲ್ಲದಿರಲು
ಜಗವು ಬೆಳಗಲುಂಟೆ ಹಗಲು ಇರುಳು
ಅಲ್ಲಿಗಲ್ಲಿಗೆ ಬಯಲಾಗದೇ ನೋಡಲು
ವಿಶ್ವದಾಭಿ ರಾಮ ವೇಮ ತಿಳಿಯೊ 269

ಆ॥ವೆ॥ ಭೂತಿ ಲೇಪನದಲಿ ಪೂತನಾಗುವದುಂಟೆ

ತಾನು ಮಾಡಿದಂಥ ದಾನ ಫಲವು
ಮನದಿ ಚಿಂತೆಯನ್ನು ಮಾಡದಿರ್ಪುದುಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮಹಿಗೆ ಬಂದದಿನವು, ಮರಳಿ ಹೋಗುವ ದಿನ
ತರಲು ಇಲ್ಲ ಹಿಂದೆ ಬರುವುದಿಲ್ಲ
ಧನದೆ ಮಾರ್ಗವೆಲ್ಲೊ ? ತಾನು ಪೋಗುವದೆಲ್ಲೊ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮರಿಗಳಿಟ್ಟು ಹುಲಿಯ ಭರದಿ ಕೊಲ್ಲಬಹುದು
ಮನವ ಹಿಡಿಯ ಬಹುದು ಮರ್ಮವರಿತು
ದೈವ ಮಾಯೆ ತಿಳಿಯ ತನಗಸಾಧ್ಯವು ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮರದಲಗ್ನಿ ಕಾಣಲರಿಯದಿರ್ಪ ತೆರದಿ
ಆತ್ಮ ತನುವಿನಲ್ಲಿ ಅಂಟಿಯಿಹುದು
ಅರಿತು ಹಿಡಿಯಬೇಕು ಆತ್ಮದ ಕುರುಹನ್ನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮೃಗಗಳಿಗು ನರರಿಗು ಮೇಲಲ್ತೆ ಪಶುಜಾತಿ
ತಿನಲು ಉಳಲು ಹಯನ ತಿನಿಸಲಿಕ್ಕೆ
ಕಷ್ಟ ಬೀಳ್ವುದದರ ಕರ್ಮವು ತೀರದು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ರಾಕ್ಷಸ ಕುಲನಾಶ ರಾಮಾಯಣವು ನೋಡ

ಕೆಡಕು ಕಾಲ ಬರಲು ಕೆಡಿಸಲಲ್ಪನೆ ಸಾಕು
ವಿಶ್ವದಾಭಿ ರಾಮ ವೇಮ ತಿಳಿಯೊ 277

ಆ॥ವೆ॥ ಶುದ್ಧ ದೃಷ್ಟಿ ತಿಳಿದ ಶುಕ್ರಸಂಥ ತಪಸ್ವಿ
ಹಿಡಿಯಲಾರದೆ ಮನ ಕೆಡಿಸಿಕೊಂಡು
ಕಣ್ಣು ಹೋಗಿ ಕಡೆಗೆ ಕಾಗೆಯಂತಾದನು
ವಿಶ್ವದಾಭಿ ರಾಮ ವೇಮ ತಿಳಿಯೊ 278

ಆ॥ವೆ॥ ಸ್ವಾತಿಯ ಹನಿ ಸಿಂಪುಬಾಯಲಿ ಮುತ್ತಕ್ಕು,
ನೀರಲಿ ಹನಿ ಬಿದ್ದು ನೀರದಕ್ಕು,
ಲಬ್ಧವಿರುವ ನೆಲದಿ ಲಾಭವು ತಪ್ಪದು
ವಿಶ್ವದಾಭಿ ರಾಮ ವೇಮ ತಿಳಿಯೊ 279

ಆ॥ವೆ॥ ಸಂತಸವ ಪಡುವರು ಸ್ವಾತಿಯ ಮಿಂಚಿಗೆ
ಸ್ವಾತಿ ಮಿಂಚಲೇನು ಸಫಲವಹುದು
ಮಿಂಚು ಗುಡುಗು ಇರದೆ ಮೇಘವು ಸುರಿವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 280

ಆ॥ವೆ॥ ಸೀತೆಯನ್ನು ಬಿಟ್ಟು ಜಿಂಕೆ ತರಲು ಪೋದ
ರಾಮಚಂದ್ರಗಿಂತ ರಸಿಕರಾರು
ಕೇಡು ಕಾಲ ಬರಲು ಕೆಡುವ ಬುದ್ಧಿಯೆ ಬಂತು
ವಿಶ್ವದಾಭಿ ರಾಮ ವೇಮ ತಿಳಿಯೊ 281

ಆ॥ವೆ॥ ಹೊಟ್ಟೆಗಾಗಿ ಮನವೆ, ಹೊಡೆದಾಟ ನಿನಗೇಕೆ ?
ಅದಕೆ ತೃಪ್ತಿಯೆಲ್ಲಿ ಅಂತವಿಲ್ಲ

ಆ||ವೆ|| ಶುಕದ ಗರ್ಭದಲ್ಲಿ ಶುಕಮಹರ್ಷಿ ಜನಿಸಿ
ಮುನಿವರೇಣ್ಯರಲ್ಲಿ ಮುಖ್ಯನಾದ
ಹತ್ತಿಕಾಯಿಯಿಂದ ಅರಿವೆಗಳ್ ಹುಟ್ಟವೇ
ವಿಶ್ವದಾಭಿ ರಾಮ ವೇಮ ತಿಳಿಯೊ 283

ಆ||ವೆ|| ಅಲ್ಲಿ ಇಲ್ಲಿಯೆನದೆ ಎಲ್ಲವು ತಾನಾಗಿ
ವಿಶ್ವವನ್ನು ಪೊರೆವ ವಿಷ್ಣುವನ್ನು
ಭಜನೆ ನಿರತ ಗೈದು ಫಲವ ಪಡೆಯಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ 284

ಆ||ವೆ|| ಸುಗುಣ ಶೀಲೆಯಾದ ಸುದತಿಯನ್ನು ಪಡೆಮು,
ಮಾನ್ಯ ಬುದ್ಧಿಯುತರು ಮಕ್ಕಳಿರಲು
ಸ್ವರ್ಗ ಲೋಕ ಸುಖವು ಸಂಸಾರಿಗೇತಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 285

ಆ||ವೆ|| ಪುತ್ರರಿಲ್ಲದಂಥ ಪುರುಷನು ಜಗದಲ್ಲಿ
ಪುಣ್ಯ ಲೋಕವೆಂತು ಪೊಂದ ಬಲ್ಲ
ಪುತ್ರಯೋಗವಿರದೆ ಪುಣ್ಯವಿರುವುದೆಂತು
ವಿಶ್ವದಾಭಿ ರಾಮ ವೇಮ ತಿಳಿಯೊ 286

ಆ||ವೆ|| ಪ್ರಾಪ್ತವಿಲ್ಲದವಗೆ ಪರುಷವೇದಿ ಸಿಗಲು
ಹೋಗುದವನ ಬಿಟ್ಟು ಒಲಿದು ಇರದೆ
ಮಳೆಯ ಕೂಡಿ ಬರುವ ಮಳೆಗಲ್ಲು ಉಳಿಯವು
ವಿಶ್ವದಾಭಿ ರಾಮ ವೇಮ ತಿಳಿಯೊ 287

ಆ॥ವೆ॥ [illegible]
ಪುಣ್ಯ ಲೋಕಗಳಿಗೆ ಪೋಪ ನರನು
ಕರ್ಮ ಸೂಕ್ಷ್ಮಗಳನು ಘನರರಿಯಲೆ ಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ 289

ಆ॥ವೆ॥ ಬಳಲಿ ಹಸಿದು ಬರುವ ಪರದೇಶಿಯನು ಕಂಡು
ಹಿಡಿಕೆ ಅನ್ನವನ್ನು ಇಕ್ಕಲಾರ
ಸೂಳೆಯ ಮಗ, ಕೊಡುವ ಸೂಳೆಯ ವೃಂದಕ್ಕೆ
ವಿಶ್ವದಾಭಿ ರಾಮ ವೇಮ ತಿಳಿಯೊ 290

ಆ॥ವೆ॥ ಜಗದಿ ಹೊಲೆಯನನ್ನು, ಜನರು ನಿಂದಿಸಲೇಕೆ ?
ಒಡಲ ರಕ್ತಮಾಂಸವೊಂದೆಯಲ್ಲ
ಅವನೊಳಗಿರುವಾತ ಆವಜಾತಿಯವನು ?
ವಿಶ್ವದಾಭಿ ರಾಮ ವೇಮ ತಿಳಿಯೊ 291

ಆ॥ವೆ॥ ಅವನು ಹೊಲೆಯನಿರಲಿ, ತವಕದಾತ್ಮದ ಮೇಲೆ
ಚಲಿಸದೆ ಮನವಿಡಲು ಹೊಲೆಯನಲ್ಲ
ವಿಚಲಿತ ಮನವುಳ್ಳ ವಿಪ್ರನೇ ಹೊಲೆಯನು
ವಿಶ್ವದಾಭಿ ರಾಮ ವೇಮ ತಿಳಿಯೊ 292

ಆ॥ವೆ॥ ಹೊಲೆಯನಶುಚಿಯೆಂದು ತಲೆಸ್ನಾನ ಮಾಡೀರಿ
ಹೊಲೆಯ ಕರ್ಮದಿಂದ ಹೊಲೆಯನಾದ
ಏಕೆ ತಿಳಿಯರಿದನ ಈ ನರ ಪಶುಗಳು
ವಿಶ್ವದಾಭಿ ರಾಮ ವೇಮ ತಿಳಿಯೊ 293

ಆ॥ವೆ॥ ಅಡವಿಯಲ್ಲಿ ಇಲ್ಲ, ಆಗಸದಲಿ ಇಲ್ಲ,
ಇಳೆಯ ತೀರ್ಥ ಯಾತ್ರೆಗಳಲಿಯಿಲ್ಲ,

ಕೃಪೆಯ ತೋರ್ವನೇನು ತಪನವಿಷ್ಟ
ಭಜಿಪುದಿಲ್ಲ ಸುಖದ ಪ್ರಾಪ್ತಿಯು ಬಂದಾಗ
ವಿಶ್ವದಾಭಿ ರಾಮ ವೇಮ ತಿಳಿಯೊ 295

ಆ||ವೆ|| ಅಳಿವು ಕಾಲದಲ್ಲಿ ಅಭಿಮಾನವನು ಬಿಟ್ಟು
ಕಾಲವೊಂದು ರೀತಿ ಕಳೆಯಬೇಕು
ವಿಜಯ ಕಾಲತಪ್ಪಿ ವಿರಟನ ಸೇರನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 296

ಆ||ವೆ|| ಅಲೆಯ ನೀರಗುಳ್ಳೆ ಅಳಿವುದು ಕ್ಷಣದಲ್ಲಿ
ಕನಸಿನಲ್ಲಿನ ಸಿರಿ ಕೈಗೆ ಸಿಗದು
ಇಳೆಯ ಭೋಗ ಭಾಗ್ಯವಿದರಂತೆ ಇರುವದು
ವಿಶ್ವದಾಭಿ ರಾಮ ವೇಮ ತಿಳಿಯೊ 297

ಆ||ವೆ|| ಅಗಸನರಿವೆ ಒಗೆದು ಅತ್ತಿತ್ತ ಎಳೆದಾಡಿ
ಕೊಳೆಯ ತೊಳೆದು ಹೊಳಪು ಕೊಡುವ ಹಾಗೆ
ಬುದ್ಧಿ ಕಲಿಸುವವನು ಗುದ್ದಿದರೇನಯ್ಯ ?
ವಿಶ್ವದಾಭಿ ರಾಮ ವೇಮ ತಿಳಿಯೊ 298

ಆ||ವೆ|| ಅಲ್ಪವಾದ ಸುಖಕೆ ಹದಿನಾಲ್ಕು ಜಗಗಳು
ಮುಕ್ಕು ತಟ್ಟೆ ಕಾಯ್ವ ಬೆಕ್ಕಿನಂತೆ
ಮಾರನ ಬಲೆಯಲ್ಲಿ ಮರುಗುತಾಶಿಸುವರು
ವಿಶ್ವದಾಭಿ ರಾಮ ವೇಮ ತಿಳಿಯೊ 299

ಆ||ವೆ|| ಈಷಣತ್ರಯವನು, ಹೇಸಿ ಅಳಿಸದಿರೆ

ಅಡಿಗೆ ಮಾಡದಿರಲು ಅನ್ನ ಸಿಗುವದೆಂತು ?
ವಿಶ್ವದಾಭಿ ರಾಮ ವೇಮ ತಿಳಿಯೊ 301

ಆ॥ವೆ॥ ಕೊಳಚೆಯಲ್ಲಿ ಹುಟ್ಟಿ ಕೊಳೆಯಲ್ಲಿ ಬೆಳೆಯುತ
ಕೂಳೆವ ಕಾಯಕಿಷ್ಟು ಕುಣಿತವೇಕೆ ?
ಕೊಳೆಯರಿತವ ಮತ್ತು ಕೊಳೆಯಲ್ಲಿ ಹುಟ್ಟನು
ವಿಶ್ವದಾಭಿ ರಾಮ ವೇಮ ತಿಳಿಯೊ 302

ಆ॥ವೆ॥ ಕೇಡು ಒದಗಿದಾಗ ಕೆಡಬೈವ ದೇವನ
ಒಳಿತು ಒದಗಿದಾಗ ಒಲಿಮೆ ತೋರ್ವ
ನೋವು ಒಳಿತಿವೆರಡು ಕಾವಡಿ ಕೊಡಗಳು
ವಿಶ್ವದಾಭಿ ರಾಮ ವೇಮ ತಿಳಿಯೊ 303

ಆ॥ವೆ॥ ಗಗನಕೆ ನೆಗೆಯುವನು ಜಗದಿ ಕಾಣಲು ಇಲ್ಲ.
ಬಂಗಿ ಕುಡಿಯುವವನು ಬಲಿವುದಿಲ್ಲ
ಬಕದ ಯೋಗದಿಂದ ಬಯಕೆ ನಾಶನವಿಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 304

ಆ॥ವೆ॥ ತಾಳು, ಇಲ್ಲವೆನದೆ ತರ್ಕ ಮಾತಾಡದೆ
ಮನಸಿನಲ್ಲಿ ಕೊಡಲು ಮಥನ ಪಡದೆ
ತನ್ನದಲ್ಲವೆಂದು ತಾ ಕೊಡುವದು ದಾನ !
ವಿಶ್ವದಾಭಿ ರಾಮ ವೇಮ ತಿಳಿಯೊ 305

ಆ॥ವೆ॥ ತನ್ನ ಅಣ್ಣನವರು ದಾನವ ಮಾಡಲು
ತನಗೆ ಫಲವಿದೆಂದು ಎಣಿಸಲೇಕೆ ?

ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅತಿಥಿಬರಲುಕಂಡು ಅತಿಸಿಂದೆಗೈವರು
ಕಠಿಣ ಮನಸಿನಿಂದ ಕಾಣದಿಹರು
ಧರ್ಮಬದ್ಧರಾಗಿ ದಾನವ ಮಾಡರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬರಹದಷ್ಟೆ, ಬೇರೆ ವರನೀಡನಾದೈವ
ಪುರುಷ ಯತ್ನವಿರದೆ ಬರಹವಿರದು
ಅಜನು ಬರಹ ಕರ್ತ ಯತ್ನಕೆ ತಾಂಕರ್ತ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮತಗಳೆಷ್ಟೆಯಿರಲಿ ಸತತ ನಿಲ್ಲುವದಿಲ್ಲ
ಸತತ ನಿಲ್ವ ದೇವ ಜಗತಿಯಲ್ಲಿ
ಎಲ್ಲ ಮತಗಳಲ್ಲಿಯಿರುವನೊಬ್ಬನೆ ದೇವ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮರ್ಮವನ್ನರಿಯದೆ ಮತಗಳ ಕಲ್ಪಿಸಿ
ಉರ್ವಿಜನರು ದುಃಖ ಹೊಂದುತಿಹರು
ಗಾಜಿನ ಮನೆಯಲ್ಲಿ ಕಳಲುವ ನಾಯಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬೆರಳಿನಿಂದ ಬೆಟ್ಟವೆತ್ತಿದ ಶ್ರೀ ಕೃಷ್ಣ
ಆಲದೆಲೆಯ ಮೇಲೆ ತೇಲಿದನಹ
ಎಂಥವರನು ಕಾಲವಿಂತು ಬಿಡದು ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ

ಇಲ್ಲವಾದರೆಷ್ಟೊ ಹೆಚ್ಚಿಗಾದರು ಅಷ್ಟೆ
ವಿಶ್ವದಾಭಿ ರಾಮ ವೇಮ ತಿಳಿಯೊ 313

ಆ||ವೆ|| ಮಳೆಯು ಬರುವದನ್ನು ಮರಣವಾಗುವದನ್ನು
ಮಹಿಯಲಿ ಗುರುತಿಸಿದ ಮಹಿತರಾರು
ಗುರುತಿಸಿದರೆ ಕಲಿಯ ಕುರುಹೆ ಇರುವುದಿಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 314

ಆ||ವೆ|| ಮೌನವನು ವಹಿಸದೆ ಮಂತ್ರ ಸಿಗುವುದಿಲ್ಲ
ಮಂತ್ರವನ್ನು ಬಿಡದೆ ಮನನಿಲುಕದು
ಮನವು ನಿಲ್ಲದಿರಲು ಮತ್ತೆಲ್ಲಿ ಮೋಕ್ಷವು ?
ವಿಶ್ವದಾಭಿ ರಾಮ ವೇಮ ತಿಳಿಯೊ 315

ಆ||ವೆ|| ಮಾತನುಳಿಸದಂಥ ಮನುಜನೇ ಚಂಡಾಲ,
ಆಜ್ಞೆನಡೆಸದರಸನಳುಕು ಹೆಣ್ಣು
ಮಹಿಮೆಯಿರದ ದೇವ ಮಣ್ಣಿನ ಹುಲಿಯಣ್ಣಾ
ವಿಶ್ವದಾಭಿ ರಾಮ ವೇಮ ತಿಳಿಯೊ 316

ಆ||ವೆ|| ರುಚಿ ರುಚಿಗಳು ಬೇಕು, ರುಚಿರಾಂಗಿಯರು ಬೇಕು
ಮನುಜನೆಂಥ ಕೆಟ್ಟ ಮನಸಿನವನು
ಅಣುವಿನಷ್ಟು ಕೂಡ ಅನನು ತಾನೊಲ್ಲೆಂದು
ವಿಶ್ವದಾಭಿ ರಾಮ ವೇಮ ತಿಳಿಯೊ 317

ಆ||ವೆ|| ವಿಧಿಯು ಕವಿದು ಬರಲು ಅದನು ಮೀರಲಸಾಧ್ಯ
ಧರ್ಮಜನಿಗೆ ಕೂಡ ತಪ್ಪಲಿಲ್ಲ

ಮಡದಿಯನ್ನು ಮಗನ ಮಾರಿ ಬಿಟ್ಟು,
ಹಾಳು ಹೊಲೆಯನಲ್ಲಿ ಆಳು ತಾನಾಗನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 319

ಆ॥ವೆ॥ ಸತಿಯರೊಲವಿನಿಂದ ಸೌಖ್ಯವಿರುವುದೆಂದು
ಮಂಕರಾದರು ಜನ ಮತಿಯು ತಪ್ಪಿ
ಸತಿಯರಿಂದ ಸುಗಮಗತಿ ಕಾಣಲಾರರು
ವಿಶ್ವದಾಭಿ ರಾಮ ವೇಮ ತಿಳಿಯೊ 320

ಆ॥ವೆ॥ ಆದಿ ಅಂತಗಳನ ಅರಿಯದೆ ದಿನವೆಲ್ಲ
ಹೀನರಾಗಿ ತಿರುಗಲೇನು ಫಲವು
ಮರದಿ ಮರಕೆ ನೆಗೆವ ಮಂಗನ ಚಂದದಿ
ವಿಶ್ವದಾಭಿ ರಾಮ ವೇಮ ತಿಳಿಯೊ 321

ಆ॥ವೆ॥ ಗಂಡನನ್ನು ಕಂಡು ಕಾಮಿನಿ ದುಃಖಿಸಿ
ವಿಟನ ಸೇರಿ ಕಷ್ಟ ಬೀಳುತಿಹಳು
ಕುಲಟೆಯಾದವಳನು ತೊಲಗಿಸುವದು ಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ 322

ಆ॥ವೆ॥ ಅನ್ಯರ ಸಿರಿಕಂಡು ಅಳುವ ಮೂರ್ಖ ಜನಕೆ
ಭಾಗ್ಯವೆಂತು ಕೊಡುವ ಪರಮ ಗುರುವು
ಜೀವಿ ಪೂರ್ವಕರ್ಮ ದೇವ ತಾನರಿಯನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 323

ಆ॥ವೆ॥ ಕಣ್ಣಿನ ಉರಿಯಿಂದ ಕಾಮನನ್ನು ದಹಿಸಿ

ವೇ॥ ಅಂತರಂಗದಲ್ಲಿ ಹರನನ್ನು ಮರೆಯದೆ
ನೆನೆಯುತಿರಲು ಮುಕ್ತಿ ತನಗೆ ಉಂಟು
ಬಾಹ್ಯರಂಗದಲ್ಲಿ ಭಯಪಟ್ಟು ಫಲವೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ 325

ವೇ॥ ಆವಗೊಂದಲಿರದೆ ಆನಂದವನು ತುಂಬಿ
ಮನವ ನಿಲಿಸುವವನು ಮಾನ್ಯನೆಲ್ಲೆ
ಸದಮಲತ್ವದಿಂದ ಶಾಶ್ವತೇಶ್ವರನಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 326

ವೇ॥ ಇಚ್ಛೆಯಿಂದ ಜ್ಞಾನದೀಜನ್ನು ಕಲಿತವ
ಜಡಧಿಯೆಂಬ ತಮಕೆ ಜಡಿಯದಂತೆ
ಮುಕ್ತಿಯೆಂಬ ತೀರ ಯುಕ್ತಿಯಿಂ ಸೇರುವ
ವಿಶ್ವದಾಭಿ ರಾಮ ವೇಮ ತಿಳಿಯೊ 327

ವೇ॥ ತನುವಿನಲಿ ನೆಲೆಸಿಹ ಘನಶತ್ರು ಮಿತ್ರರ
ನರಿಯದೆ ಇರುವವನ ಅರಿವದೇಕೆ
ಧಿಷಣದಿಂದಲರಿಯೆ, ದಿವ್ಯಾಮೃತವು ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 328

ವೇ॥ ಏಕೆ ಹೆಣ್ಣಿನಾಶೆ ? ಏಕಾಗ್ರ ಚಿತ್ತದಿ
ಹರಿ ಹರಾದಿಗಳಲಿ ಆಶೆಬಿಟ್ಟು
ಶಾಂತರಾಗಿಯಿರಲು ಸಾನಂದಫಲವಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 329

ವೇ॥ ಎಡರು ಮನವನರಿತು ಏಕಾಂತದಲಿರಿಸಿ

ಆ||ವೆ|| ಕಾಮಿಯಾಗದವನು ಕವಿಯಾಗ ರವಿಯಾಗ
ಕಾಮಿಯಾಗದೆ ಪರಗಾಮಿಯಾಗ
ಕಾಮಿಯಾಗಲವನು ಕವಿಯಕ್ಕು ರವಿಯಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 331

ಆ||ವೆ|| ಜಾತಿ ಭೇದವಿಡದೆ ಜನ್ಮದಾರಭ್ಯದಿ
ಶಿವನ ಧ್ಯಾನದಲ್ಲಿ ಚಿತ್ತವಿಡಲು
ಘನನು ಅವನೆ ಅಖಿಲ ಜನರಲ್ಲಿ ನೋಡಲು
ವಿಶ್ವದಾಭಿ ರಾಮ ವೇಮ ತಿಳಿಯೊ 332

ಆ||ವೆ|| ಕತ್ತಲು ಮನೆಸೇರಿ, ಕಾತಳ ಪಡಲೇಕೆ
ಪೋಗಿ ಬರುವದನ್ನು ಪೂರ್ಣ ತಿಳಿದು
ಏಕ ತೇಜವನ್ನು ಎಟುಕುತ ನೀ ಕಾಣು
ವಿಶ್ವದಾಭಿ ರಾಮ ವೇಮ ತಿಳಿಯೊ 333

ಆ||ವೆ|| ತನ್ನದಾದ ಹಣವು ದಾನವಮಾಡಲು
ದಾತನಲ್ಲ ಅವನು, ಧೈರ್ಯದಿಂದ,
ಧನಪರರದು ತಂದು, ದಾನ ಮಾಡಲು ದಾತ,
ವಿಶ್ವದಾಭಿ ರಾಮ ವೇಮ ತಿಳಿಯೊ 334

ಆ||ವೆ|| ಮಣ್ಣು ಮುಗಿಲು ನಡುವೆ ಮಂಡಿಸಿ ಇರುವಂಥ
ಜನರ ಎಣಿಕೆ ಯಿಡಲು ಸಾಧ್ಯವಲ್ಲ
ಆದರವರು ಸಾವಿಗಾದವರೇ ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 335

ಆ॥ವೆ॥ ಪುಕ್ಕನಧಿಕನೆಂದು ಪೋರಲು ಕಳುಹಿಸೆ
ಪಾರಿಪೋಪ ಕಾರ್ಯ ಭಂಗವಕ್ಕು
ಹಿಂದೆ ಸರಿವ ಬಂಟ ಮುಂದೆಂದು ಬಾರನು
ವಿಶ್ವದಾಭಿ ರಾಮ ವೇಮ ತಿಳಿಯೊ 337

ಆ॥ವೆ॥ ನೆರಳು ಬಿಸಿಲು ಬಣ್ಣ ಬೆರತೊಂದೆಯಿರುವಂತೆ
ಪೂರ್ಣ ಕುಂಭಗಳಲಿ ಪೊಗಿಸಿ ನಿಲಿಸಿ
ಪೂತ ತತ್ವವನ್ನು ಪೊಂದು ನೀ ಪ್ರತ್ಯಕ್ಷ
ವಿಶ್ವದಾಭಿ ರಾಮ ವೇಮ ತಿಳಿಯೊ 338

ಆ॥ವೆ॥ ನೇಮದಾಸನದಲಿ ನಿಂತಿರ್ಪ ಚಿತ್ತವು
ತಮದ ನಿದ್ರೆಯನ್ನು ತಪ್ಪಿಸುವದು
ನಿದ್ರೆಹೋದ ಬಳಿಕ ನಿರ್ಭೀತಿ ಜನಿಪುದು
ವಿಶ್ವದಾಭಿ ರಾಮ ವೇಮ ತಿಳಿಯೊ 339

ಆ॥ವೆ॥ ಪತಿಯ ಕಾಲದಲ್ಲಿ ಸತಿ ಕಷ್ಟ ಪಟ್ಟರೇ
ಸುತರ ಕಾಲದಲ್ಲಿ ಸುಖ ಬರುವುದು
ಕಷ್ಟ ಸುಖಗಳೆರಡು ಕಾಣಲೆಲ್ಲರಿಗುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ 340

ಆ॥ವೆ॥ ಮಾತನಾಡ ಕಲಿತು ಮನಸನ್ನು ರಂಜಿಸಿ
ಅಣಗಿ ಪ್ರಿಯವ ತೋರಿ ದಣಿಯದಿರಲು
ಬೇರೆಯವರವಸ್ತು ಬಿಟ್ಟಿಗೆ ಬರುವದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 341

ಆ||ವೆ|| ಮತ್ಸರ ಮಮಕಾರ ಮದಗಳೆಂಬೀಮೂರು
ವ್ಯಸನಗಳಿಗೆ ಸಿಕ್ಕಿ ಬಳಲ ಬೇಡ
ಪರರಿಗುಪಕರಿಸುತ ಪರಮನಾಗಲು ಪೋಗು
ವಿಶ್ವದಾಭಿ ರಾಮ ವೇಮ ತಿಳಿಯೊ 343

ಆ||ವೆ|| ಮಾಯೆಯಳಿಪವಿಧವು ಮನದಲಿ ನೆನೆದರೇ
ಮಾರ್ಗ ಒಳಿತುಲಭ್ಯ ಮಾನವರಿಗೆ
ಮಾಯೆಯಳಿಸದಿರುವ ಮನುಜ ಜನ್ಮವೆವ್ಯರ್ಥ
ವಿಶ್ವದಾಭಿ ರಾಮ ವೇಮ ತಿಳಿಯೊ 344

ಆ||ವೆ|| ಮತ್ತಚಿತ್ತರಿರುವ ಮರ್ಮವನ್ನರಿಯದೆ
ಕೆಡುವರು ಮನದಾಟ ದುಡುಕಿನಿಂದ
ಚಿತ್ತವಲ್ಲಿಯಿರದೆ ಸಿಗುವನೇ ಪರಮಾತ್ಮ
ವಿಶ್ವದಾಭಿ ರಾಮ ವೇಮ ತಿಳಿಯೊ 345

ಆ||ವೆ|| ಮಾಯೆಯ ಭಯವಿರದ ಮನುಜನೇ ಮನುಜನು
ಮಾಯೆಯಲ್ಲಿ ಮುಳುಗೆ ಮನುಜನೆಂತು
ಕಾಯಬಿಟ್ಟ ಬಳಿಕ ಮಾಯೆಯು ಬಿಡುವದು
ವಿಶ್ವದಾಭಿ ರಾಮ ವೇಮ ತಿಳಿಯೊ 346

ಆ||ವೆ|| ಮಾತಿ ಮಾತಿಗಳುವ ಮಡದಿಯೇ ಯಮದೂತೆ
ಪಟಲವಿಟ್ಟು, ಪತಿಗೆ ವಿಟನ ಸೇರು
ಪಂಥ ಹೆಣ್ಣ ಬಿಟ್ಟು, ಅಡವಿ ಸೇರಲು ಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ 347

ವೃದ್ಧಿಹೊಂದುವವನು ಪ್ರಿಯಭಕ್ತ ದೇವರಿಗೆ
ವಿಶ್ವದಾಭಿ ರಾಮ ವೇಮ ತಿಳಿಯೊ 349

ಆ॥ವೆ॥ ರಾಮನೋರ್ವ ಹುಟ್ಟಿ ರವಿಕುಲವೆತ್ತಿದ
ಖಳ ಕುರುಪತಿ, ನಾಶಗೈದ ಕುಲವ
ಧರಣಿಯಲಿ ಅಧರ್ಮ, ಧರ್ಮವಿಷ್ಟೇ ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 350

ಆ॥ವೆ॥ ಸಹನ ತುಂಬಿದಂಥ ಸಾಧು ತಾ ಶೋಭಿಪ
ತಾಳ್ಮೆಗುಪಮೆಯಿಲ್ಲ ಧರಣಿಯಲ್ಲಿ
ಯಶವು ಹೆಚ್ಚು, ಶುಭಗದಶೆ ಕೂಡಿ ಬರುವುದು
ವಿಶ್ವದಾಭಿ ರಾಮ ವೇಮ ತಿಳಿಯೊ 351

ಆ॥ವೆ॥ ಸ್ವಚ್ಛಪಡಿಸಿ ಮನವ ವಶವರ್ತಿಯನು ಮಾಡಿ
ಮೋದ ಪಡೆದು ಶಿವನ ಮೂರ್ತಿ ಕಂಡು
ಖುಲ್ಲ ತನವನಳಿಸಿ ಗೆಲ್ಲುವದೇ ಯೋಗ
ವಿಶ್ವದಾಭಿ ರಾಮ ವೇಮ ತಿಳಿಯೊ 352

ಆ॥ವೆ॥ ಸದ್ಗುರು ಕೃಪೆಯಿಂದ ಜ್ಞಾನ ಸದ್ಗತಿಗಳು
ಸುಲಭವಿರಲು ಓದು ಕಲಿಯಲೇಕೆ ?
ಸದ್ಗತಿ ಕೊಡುವವನ, ಸಾರುದೈವವೆನುತ
ವಿಶ್ವದಾಭಿ ರಾಮ ವೇಮ ತಿಳಿಯೊ 353

ಆ॥ವೆ॥ ಷೋಕುಗಳಿಗೆ ಮನವು ಸೋಂಕದಂತೆ, ಶಿವನ
ಭಕ್ತನಾಗಿರುವಪ ವಂಶ ಪರನು
ಭಕ್ತನಾಗದಿರಲು ಬರುವದೇ ಅಪವರ್ಗ ?

ಅರಿವಿನಿಂದ ಅದನ ಅರಿಯಬಹುದು
ಅದು ಅಧೈರ್ಯದವಗೆ ಅಂಟದುಮನದಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಅರಿತ ಶಿವನಪೂಜೆ ಅಳಿಸಿ ಪೋಗುವದಿಲ್ಲ
ಹಿಡಿತವಿಡಿದು ಮತ್ತು ಬಿಡಲು ಬೇಡ
ಮೂಲವಿರದೆ ಗೋಡೆ ಮೇಲೆ ನಿಲ್ಲುವದೆಂತು ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕಳ್ಳ, ಸುಳ್ಳ, ದ್ರೋಹ, ಕಟುಕ ಕೃತ್ಯವೆನದೆ,
ಧನಿಕ ಲುಬ್ಧ ಜನರ ಧನವ ಗ್ರಹಿಸಿ
ದಯದಿ ದೀನಜನಕೆ ದಾನ ಮಾಡಲುಪುಣ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತಾರಕವನು ಕಾಣ್ವ ದಾರಿ ಬೇರಿರುವದು
ಸಮದಿ ಕಾಣಲು ಅದು ಸಾಂಗಲಭ್ಯ
ಹುಚ್ಚು ನೋಟದಿಂದ ಹೊಳಪೆಲ್ಲ ಹಾಳಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ದೇವರೆಂದರೆ ಪರದೇಶದಲ್ಲಿರುವನೇ
ದೇವರೆನಲು ನಿನ್ನ ದೇಹವೇರಿ
ಸ್ವಾರಿ ಮಾಳ್ಪ , ದೃಷ್ಟಿ ಸಾರಿಸಿ ನೀಕಾಣು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸಕ್ತಿಯಿರುವ ಕಾರ್ಯ ಸಾಂಗಪೂರ್ಣವಹುದು

ಆ॥ವೆ॥ ಅಂಗವೆಲ್ಲ ಸಡಲಿ ಹಲ್ಲುಗಳವು ಬಿದ್ದು
ವಯಸು ಮೀರಿ ಕಾಯ ಬಳಕುವಂಥ
ಮುಪ್ಪು ಕವಿದರೇನು ಮೋಹವು ಬಿಡದಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 361

ಆ॥ವೆ॥ ಅಂಗನೆಯರ ಸಂಗದಾನಂದ ಪಡುವವ
ಸುರರ ಮಹಿತ ಲೋಕ ಸುಖವನೊಲ್ಲ
ಹೊಲೆಯ ಕೇರಿ ನಾಯಿ ಕೊಳೆ ಮಾಂಸ ಬಿಡುವದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 362

ಆ॥ವೆ॥ ಅಳೆದು ತಿಳಿಯಬಹುದು ಜಲಧಿಗಳಾಳವ
ಜಾತಿ ಬಿಡಲು ಬಹುದು ಜಗತಿಯಲ್ಲಿ
ಹೇಸಿ ಮೋಹ ಜಲಧಿ ಈಜಲಸಾಧ್ಯವು
ವಿಶ್ವದಾಭಿ ರಾಮ ವೇಮ ತಿಳಿಯೊ 363

ಆ॥ವೆ॥ ಇಂದ್ರ ಕಾಮಿಯಾದ ಹೇಸಿಕೆಗೀಡಾದ
ಮಾರ ಕಾಮಿಯಾದ ಮಡಿದುಹೋದ
ಧಾತ ಕಾಮಿಯಾದ ದಂಡನೆಗೊಳಗಾದ
ವಿಶ್ವದಾಭಿ ರಾಮ ವೇಮ ತಿಳಿಯೊ 364

ಆ॥ವೆ॥ ಇಂದ್ರನಾದರೇನು, ಚಂದ್ರನಾದರು ಏನು,
ಅಂಗನೆಯರ ಮೋಹ ಸಂಗಬಿಟ್ಟು
ಮುಕ್ತಿ ಪಡೆವುದಕ್ಕೆ ಮುತ್ತಿ ಹೋರಲು ಬೇಕು,
ವಿಶ್ವದಾಭಿ ರಾಮ ವೇಮ ತಿಳಿಯೊ 365

ಆ॥ವೆ॥ ಈಜು ಬಾರದವನು ಎಷ್ಟು ಯತ್ನಿಸಲೇನು

ಕಾಶಿಗೋಡಲೇನು ಕಾಲನು ಬಿಡುವನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 367

ಆ॥ವೆ॥ ಎನಿತು ಕಷ್ಟಗಳಿಗೆ ಅನಿತು ಪಾಪದಚಿಂತೆ
ಚಿಂತೆ ಸೊರಗಿಸುವದು ಚಿತ್ತವನ್ನು
ಚಿಂತೆ ಬಿಡಲು ಕೆಡದ ಸಿರಿಯನೊಂದಬಹುದು
ವಿಶ್ವದಾಭಿ ರಾಮ ವೇಮ ತಿಳಿಯೊ 368

ಆ॥ವೆ॥ ಜ್ಞಾನ ಭಾವ ಪಥವು ಕಾಣದೆಯಿದ್ದರು
ಮಾಣದೆ ಮನದಲ್ಲಿ ಮಮತೆಯಿಡಲು
ಮುಂದೆ ಜನ್ಮಗಳಲಿ ಪೊಂದುವನಿಳೆಯಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 369

ಆ॥ವೆ॥ ತಾವು ಹೆತ್ತವರನು ತಮ್ಮ ಹೆತ್ತವರನು
ಸಾವು ಬಿಡದಿರುವದು ಸಾಕ್ಷಿ ತಾನೆ
ಬ್ರಹ್ಮಕಲ್ಪದಸಮ ಬದುಕು ನಿಲ್ಲುವದುಂಟೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 370

ಆ॥ವೆ॥ ತಟ್ಟೆ ತುಂಬ ತುಂಬಿ ತವುಡು ತಿನ್ನಲಿಡದೆ
ಹಿಂಡಗೊಡದು ಮೊಲೆಯ ಕೊಂಡ ಎಮ್ಮೆ
ಬೆಲೆಯ ಹೆಂಗಸೇಕೆ ಬಿಟ್ಟಿಗೆ ಒಲಿದಾಳು ?
ವಿಶ್ವದಾಭಿ ರಾಮ ವೇಮ ತಿಳಿಯೊ 371

ಆ॥ವೆ॥ ತಾಯಿ ತಂದೆಯೆಂಬ ತತ್ವವನ್ನರಿಯರು
ತಾಯಿ ವಿಷ್ಣು, ಶಿವನು ತಂದೆಜಗಕೆ

ಆ॥ವೆ॥ ಅಂಗನೆಯನುಕಂಡು ಅಲೆದಾಡುವದು ಚಿತ್ತ
ಅಗ್ನಿಯಲಿ ಕರಗುವ ಅರಗಿನಂತೆ
ಕೆಟ್ಟ ಮೋಹವಿಂತು ರಟ್ಟು ಮಾಡುವದಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬತ್ತಲಾಗಿ ಹುಟ್ಟಿ, ಬತ್ತಲಾಗಿಯೆಪೋಪ
ದೇಹಿ, ದಾನ ಮಹಿಮೆ ತಿಳಿಯಲಾರ
ಉಳಿದ ಕಾಲವರಿತು ಉಪಕಾರಿಯಾಗನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬಡವರಾಶೆ ತಿಳಿದು ಕೊಡುವ ದಾತನಿಗಿಂತ
ಇಂದ್ರಿಯಗಳ ಕಟ್ಟಿ ಹಿಡಿವನಧಿಕ
ಅವನ ಕಾಣುವವಗೆ ಅಘವಿನಾಶನವಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬಾಲ್ಯದಲ್ಲರಿಯನು ಬಾಲೇಂದುಧರನನ್ನು,
ಯವ್ವನದಲಿ ಯಾವ ಅರಿವು ಇಲ್ಲ
ವಾರ್ಧಕದಲಿ ಮೋಹಪಾಲಾಗಿ ತಿಳಿಯನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಬಾಲ್ಯದಲ್ಲಿ ಮುಕ್ತಿಪದಕರ್ಥ ತಿಳಿಯದು
ಪ್ರಾಯದಲ್ಲಿ ಕಾಮ ಬಂಧ ಬಿಡದು,
ಮುಪ್ಪಿನಲ್ಲಿ ಚಿಂತೆ, ಮುಕ್ತಿ ಕಾಣುವನೆಂತು
ವಿಶ್ವದಾಭಿ ರಾಮ ವೇಮ ತಿಳಿಯೊ

ಮನವನಿಡುವರೊಬ್ಬ ಮಹಿಳೆಯಲ್ಲಿ
ಇಂಥ ವ್ಯರ್ಥ ಜನ್ಮವೆತ್ತಲು ಫಲವೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ 379

ಆ॥ವೆ॥ ಮಡದಿ ಮಕ್ಕಳೆಂದು ಕಡುಮೋಹದಲಿ ಸಿಕ್ಕಿ
ಹಣದ ಮೇಲೆ ಆಶೆಯಂಟಿಕೊಂಡು
ಇದ್ದರವನ ಮುಕ್ತಿ ಇಳೆಯಲಿ ಇರುವದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 380

ಆ॥ವೆ॥ ಮಾಯೆ ಮುಚ್ಚಿಯುರುಳು ಮಾಯೆ ಸಂಸರದಲ್ಲಿ
ಮಾಯೆಯಲ್ಲಿ ಮುಳುಗು ಮಂಕಿನಿಂದ
ಮಾಯೆಮಂಕು ಬಿಡಲು ಮಾಯೆಯಲ್ಲೇ ಮುಕ್ತಿ
ವಿಶ್ವದಾಭಿ ರಾಮ ವೇಮ ತಿಳಿಯೊ 381

ಆ॥ವೆ॥ ಮಾಯೆಯಲ್ಲಿ ಇದ್ದ ಮರ್ಮವ ತಿಳಿಯದೆ
ಮಾಯೆ ಬಲೆಗೆ ಸಿಗಲು ಮಾಯೆ ಬಿಡದು
ಮಾಯೆತಿಳಿಯೆ, ದಿವ್ಯವಾಯಿತು ನರಜನ್ಮ
ವಿಶ್ವದಾಭಿ ರಾಮ ವೇಮ ತಿಳಿಯೊ 382

ಆ॥ವೆ॥ ಮೇಘವಡ್ಡಬರಲು ಮಿಹಿರನನ್ನು ಕೆಡಿಸು
ಚಿತ್ತವಡ್ಡಬರಲು ಸ್ಥಿರವ ಕೆಡಿಸು
ಮರೆವು ಅಡ್ಡಬರಲು ಮತ್ತೆಲ್ಲಿ ಕ್ಷೇಮವು ?
ವಿಶ್ವದಾಭಿ ರಾಮ ವೇಮ ತಿಳಿಯೊ 383

ಆ॥ವೆ॥ ಲಲನೆಕಂಡು, ದುಂಡು ಮೊಲೆಗಳ ಬಿಗಿಕಂಡು,

ವಿಶ್ವದಾಭಿ ರಾಮ ವೇಮ ತಿಳಿಯೊ 385

ವೇ॥ ಲೋಭ ಮೋಹಗಳವು ಪ್ರಾಭವ ಕಳೆವವು
ನೆನೆವ ಕಾರ್ಯವೆಲ್ಲ ನೀರದಕ್ಕು
ಲೋಭ ಮೋಹಗಳಿಗೆ ಲೋಲನಾಗಲುಬೇಡ
ವಿಶ್ವದಾಭಿ ರಾಮ ವೇಮ ತಿಳಿಯೊ 386

ವೇ॥ ಸತಿಯು ಸುತರು ಮಾಯೆ, ಸಹಜನ್ಮರೂ ಮಾಯೆ,
ತಾಯಿ ತಂದೆ ಮಾಯೆ, ತಾನು ಮಾಯೆ,
ಅರಿಯಬಿಡದು ಮಾಯೆ ಹಾಳಾಗಿ ಹೋಗಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 387

ವೇ॥ ಪತ್ನಿಯಲ್ಲಿ ಆಶೆ ಪತಿಗೆ ಇರುವದುಂಟು
ಪತ್ನಿಗುಂಟು ಆಶೆ ಪತಿಯ ಮೇಲೆ
ಶಿವನ ಮೇಲೆ ಆಶೆ ಸಿದ್ಧನಿಗೇಉಂಟು
ವಿಶ್ವದಾಭಿ ರಾಮ ವೇಮ ತಿಳಿಯೊ 388

ವೇ॥ ಶಿರದಿ ಹರನು ಹೊತ್ತ, ಹರಿ ಹೊತ್ತನೆದೆಯಲ್ಲಿ,
ಬಾಯಲಿ ಅಜಹೊತ್ತ ಭ್ರಾಂತಿಯಿಂದ
ಮುಗುದೆಯರಿಗೆ ಮುದದಿ ಮೂವರು ಸೋತರು
ವಿಶ್ವದಾಭಿ ರಾಮ ವೇಮ ತಿಳಿಯೊ 389

ವೇ॥ ದುಂಡು ಕುಚಗಳನ್ನು, ಕಂಡು ಕಾಮವು ಹೆಚ್ಚಿ
ಕಾಂತೆಗುಪಚರಿಸುತ ಭ್ರಾಂತಿ ಬಿಡದೆ
ಬಳಲಿ ಬಳಲಿ ನರನು ನೆಲಕಚ್ಚಿ ಸಾಯ್ವನು
ವಿಶ್ವದಾಭಿ ರಾಮ ವೇಮ ತಿಳಿಯೊ 390

ಆ॥ವೆ॥ ಗಾಸಿ ಹೊಂದಲೇಕೆ ? ಕಾಮನಾಶನಗೈದು
ಭಕ್ತಿಪಾರವಶ್ಯ ಪಥವನರಿತು
ಮೋಸ ಹೋಗದಂತೆ ಮುಗಿಯುವದೇ ಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹಸುವುಹಾಲು, ಹರನಿಗಭಿಷೇಕಿಸಬಹುದು
ಹಸುವುಹಾಲು, ಬರುವ್ರಗೌಷಧಕ್ಕೆ
ಹಸುವುಹಾಲಲಿರುವ ಅತಿಶಯ ತಿಳಿಯಿರಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಈಶ್ವರನಿಗೆ ಮೋಹ ಎಳ್ಳಿನಷ್ಟು ಕೊರತೆ
ಅಬ್ಜ ಭವನಿಗಿದುವೆ ಹಾಳು ಕೊರತೆ
ವಿಷ್ಣು ದೇವನಿಗಿದು ವಿಪರೀತದ ಕೊರತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಉಚ್ಚೆ ಚಿಲುಮೆಯನ್ನು ಇಚ್ಚೈಸಿ ಜಗವೆಲ್ಲ
ಹುಚ್ಚುಹಿಡಿದು ಜಗಳ ಹೂಡುತಿಹರು
ತುಚ್ಛ ಸುಖವಿದನ್ನು ತುಂಡಿಸಲಾರರು
ವಿಶ್ವದಾಭಿ ರಾಮ ವೇಮ ತಿಳಿಯೊ.

ಆ॥ವೆ॥ ಊರು ಕೊಂಡವೀಡು, ಕೇರಿ ಪಡುವಣಕ್ಕೆ
ಮೂಗಚಿಂತೆಹಳ್ಳಿ, ಮೊದಲ ಮನೆಯು
ಹೆಡ್ಡ ರೆಡ್ಡಿಯ ಕುಲವೇನೆಂದು ಹೇಳಲಿ
ವಿಶ್ವದಾಭಿ ರಾಮ ವೇಮ ತಿಳಿಯೊ

# 11. ಯೋಗಿ ಪದ್ಧತಿ

ಆ॥ವೆ॥ ಅಂಜನದಿ ನಿಧಿಯನು ಅರಿತಂತೆ ಆತ್ಮನ
ಜ್ಞಾನದಂಜನದಲಿ ತಾನೆಯರಿತು
ಆಶೆಯನ್ನು ತೊರೆಯಲವನಹೋ! ಶಿವಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 397

ಆ॥ವೆ॥ ಆಶೆಯೆತ್ತಿಯೆಸೆದು, ಅನಲವನ್ನಾರಿಸಿ,
ಗೋಸಿ ಬಿಗಿತಹಿಡಿದು, ಗುಟ್ಟು ತಿಳಿದು,
ನಿಂತ ಸಾಧುಗುಣಿಯೆ ನಿರ್ಮಲಾತ್ಮಕ ಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 398

ಆ॥ವೆ॥ ಆರ್ತರನ್ನು ತಿಳಿಯದವನ ವೈಭವವೇಕೆ ?
ಯೋಗವರಿಯದಂಥ ಯೋಗವೇಕೆ ?
ವ್ಯಾಧಿ ತಿಳಿಯದಂಥ ವೈದ್ಯವು ಮತ್ತೇಕೆ
ವಿಶ್ವದಾಭಿ ರಾಮ ವೇಮ ತಿಳಿಯೊ 399

ಆ॥ವೆ॥ ಪರಮಪದವ ಬಯಸು ಭಕ್ತನು ನಿತ್ಯವು
ರಣದ ಜಯವ ಬಯಸು ರಾಜ ವರನು
ಭಾಮಿನಿಯರ ಸಂಗ ಬಯಸುವ ಮೂರ್ಖನು
ವಿಶ್ವದಾಭಿ ರಾಮ ವೇಮ ತಿಳಿಯೊ 400

ಆ॥ವೆ॥ ಕಾಂಚನವನುಕಂಡು, ಕಾಮಿನಿಯರಕಂಡು
ಮನವ ನಿಗ್ರಹವನು ಮಾಡುವವನು
ಪರಮಯೋಗಿವರ [illegible]

ಮದುವೆ ಮಾಡಿದಷ್ಟು ಮಹಿತ ಫಲವದಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗುಹೆಗಳೊಳಗೆ ಪೊಕ್ಕು ಗುರುಗಳ ಹುಡುಕಲು
ಕ್ರೂರ ಮೃಗವದೊಂದು ವಾರಿ ಕಾದು
ಮುಕ್ತಿ ಮಾರ್ಗವನ್ನು ಮೊದಲೆ ತೋರುವದಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗೊಂಬೆಯಾಟದವನು ಗೊಂಬೆಗಳಾಡಿಪ,
ಮುಗ್ಧ ಜನರು ಕಂಡು ಮೋದ ಪಡಲು,
ಅಂತೆ, ಜಗದ ಆಟವಾಡಿಪನಾಶಿವ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮನವಲುಕುವ ಪೂಜೆ ಮದನಾರಿ ಮೆಚ್ಚನು
ಮನವ ನಿಲ್ಲಿಸಿದರೆ ಮಹಿತನಕ್ಕು
ಮನ ನಿಲುಕದ ಪೂಜೆ ಮಣ್ಣಿನ ಸಮವಣ್ಣ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಜ್ಯೋತಿ ಕಾಣಲು ಮನ ಪ್ರೀತಿಯಂ ಪಡುತಿರೆ
ಹೆಣ್ಣಿನಲ್ಲಿ ಪ್ರೀತಿ ಹೇಸಿಯಕ್ಕು
ಮಾತೆ ಜ್ಯೋತಿಯ ಸಮ ಪ್ರೀತಿಸು ಭಕ್ತಿಯಿಂ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತಾನು ಇಂದ್ರಿಯಗಳ ದಮದಿಂದ ಜಯಿಸಲು

ಜಿಪುಣ ಕೊಡನು ಕಾಸು, ತಪನ ಪಡುವ
ಜಲವು ದಾಹವಳಿಪು, ಮಲವೆಂತು ಅಳಿಪುದು
ವಿಶ್ವದಾಭಿ ರಾಮ ವೇಮ ತಿಳಿಯೊ 409

ಆ॥ವೆ॥ ನಾಸಿಕಾಗ್ರದಲ್ಲಿ ನಯದಿ ಲಕ್ಷ್ಯವನಿಟ್ಟು
ಭದ್ರ ದೃಷ್ಟಿಯಿಡಲು ವಶ್ಯ ಮುಕ್ತಿ
ಕಾಶಿಗನುತ ಪೋಗಿ ಕಡುಕಷ್ಟ ಪಡಲೇಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 410

ಆ॥ವೆ॥ ನಾಸಿಕಾಗ್ರದಲ್ಲಿ ನಯ ದೃಷ್ಟಿ ಇರಿಸುವ
ಯೋಗಿ ಯಶವ ಪಡೆವನುರ್ವಿಯಲ್ಲಿ,
ಕಾಶಿನಾಥನವನೆ , ಗಣನಕೆ ಸಿಗಲಾರ
ವಿಶ್ವದಾಭಿ ರಾಮ ವೇಮ ತಿಳಿಯೊ 411

ಆ॥ವೆ॥ ನಾಣ್ಯವರಿತ ಸೂಳೆ, ನಗೆಯ ಮೇಲರಿಯುತ
ವಿಟನ ಪ್ರೀತಿಗೊಳಿಪ ವಿಧವನರಿಗು
ದಾಸಿಯ ಗೆಳೆತನವು ಹೇಸಿಕೆ ಧರೆಯಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 412

ಆ॥ವೆ॥ ನಿದ್ರೆಯಲ್ಲಿ ನಿದ್ರೆ ನಿಜವಾಗಿಯರಿತರೇ
ಭದ್ರವಹುದು ಮೇಲೆ ಬ್ರಹ್ಮವಿದ್ಯೆ
ನಿದ್ರೆಯನ್ನರಿತವ ನಿಜವಾದ ವರಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 413

ಆ॥ವೆ॥ ಪಂಚತತ್ವ ಫಲವ ಭಾವಿಸಿ ಪಳಗಿಸಿ

ಪಚ್ಚೆಯಲ್ಲಿ ಆಶೆ ಹೆಚ್ಚಿದವನು
ಪಚ್ಚೆ ಒಲ್ಲದವನ ಪರಮಾತ್ಮನೆನುವರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಜನಿಪುದು ಫಲದಿಂದ ಸರ್ವ ಪ್ರಪಂಚವು
ಫಲದಲಿ ಜನಿಸುವವು ಪರವು ಇಹವು
ಫಲದ ಮೇಲರಿತನು ಪ್ರಹ್ಲಾದನಿಳೆಯಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸತಿಯವರಿಸಲೇಕೆ ? ಸುತರ ಪಡೆಯಲೇಕೆ ?
ಹೆಚ್ಚು ವ್ಯಥೆಯಿದೆಲ್ಲ, ಹುಚ್ಚು ತನವು
ನೆಲದಿ ಇದ್ದ ಕಲ್ಲು ನೆತ್ತಿಗೇರಿಸಿದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಗರ್ವಿಯಿಂದ್ರಿಯಗಳ ಕಟ್ಟಲು ಆಗದೆ
ಸಾವು ಬರುವ ವೇಳೆ ಸನ್ನ್ಯಸಿಸಲು
ಆತ್ಮ ಜಯವು ಇರದೆ ಅಪವರ್ಗದೊರೆವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮೂರು ಕಣ್ಣಿನವನ ಮುದದಿಂದ ಮನವಿಟ್ಟು
ಪೂಜೆ ಮಾಡಬೇಕು ಬುದ್ಧಿಯಿಂದ
ಆತ್ಮ ಪೂಜೆಗಿಂತ ಅಧಿಕವಾವುದು ಇಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮಾಂಸ ರಕ್ತ ಮೂತ್ರ ಮಲವು ತುಂಬಿದ ಹೊಟ್ಟೆ

ನೋಟವಿಕ್ಕುವವನೆ ಸುತನಾದ ಶುಕಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 421

ಆ॥ವೆ॥ ಸತಿಯು ಸುತರು ಮಾಯೆ, ಸಂಸಾರವೇ ಮಾಯೆ,
ವ್ಯಥೆ ಸುಖಗಳು ಮಾಯೆ, ವಸ್ತು ಮಾಯೆ,
ಮಾಯ ಜೀವಕಿಷ್ಟು, ಮಾಯೆ ತುಂಬಿದ ದೈವ
ವಿಶ್ವದಾಭಿ ರಾಮ ವೇಮ ತಿಳಿಯೊ 422

ಆ॥ವೆ॥ ಸಾರಪಕ್ವ ಫಲಕೆ ಜನರಾಶೆ ಪಡುವರು
ಹಸಿರು ಕಾಯಿ ತಿನಲು ಆಶೆ ಪಡರು
ಅಂತೆ, ಐಹಿಕವನು ಆಶೆ ಮಾಡನು ಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 423

ಆ॥ವೆ॥ ಸ್ವಾನುಭೂತಿಯಿರದೆ ಶಾಸ್ತ್ರವಾಸನೆಯಿಂದ
ಸಾಧಕನಿಗೆ ಮನದ ಶಂಕೆ ಬಿಡದು
ಚಿತ್ರದೀಪದಿಂದ ಸಿಡಿಯದು ತಮವೆಂದು
ವಿಶ್ವದಾಭಿ ರಾಮ ವೇಮ ತಿಳಿಯೊ 424

ಆ॥ವೆ॥ ಹಸುಗೆ ಹುಲ್ಲನಿಟ್ಟ, ಹಾವಿಗೆ ಹವೆಯಿಟ್ಟ
ಅಂತೆ ಪ್ರೀತಿಯಿಂದ ಹಸಿವಿಗಾಗಿ
ಅವನಿಯ ಜನಕೆಲ್ಲ ಅನ್ನವಿಟ್ಟನು ದೈವ
ವಿಶ್ವದಾಭಿ ರಾಮ ವೇಮ ತಿಳಿಯೊ 425

ಆ॥ವೆ॥ ಹುಟ್ಟಿದ ಜನರೆಲ್ಲ ಉರ್ವಿಯಲ್ಲುಳಿದರೇ ?
ಹಿಡಿವುದೇನು ಜಗವು ಹಿಡಿವುದಿಲ್ಲ

ವಿಮಲ ಮನಸಿನಿಂದ ವಿಜ್ಞಾನವನು ಹೊಂದು
ವಿಶ್ವದಾಭಿ ರಾಮ ವೇಮ ತಿಳಿಯೊ 427

ಆ॥ವೆ॥ ಹೊಳೆಯದಾಟಿ ದಡಕೆ ಹೋದಂತಪಥಿಕನು
ದೋಣಿಯ ನಿಗವಿಡದೆ ತೊಲಗುವಂತೆ
ಯೋಗ ಪುರುಷನೇಕೆ ಒಡಲ ಸಂತೈಸುವ
ವಿಶ್ವದಾಭಿ ರಾಮ ವೇಮ ತಿಳಿಯೊ 428

ಆ॥ವೆ॥ ಆರ್ವರನ್ನು ಕೊಂದು, ಹರಿಯನ್ನು ನೆನೆಯುತ,
ನಿಶ್ಚಲತ್ವ ಗುಣವ ನೆಲೆಸಿಕೊಂಡು
ಆತ್ಮಗತಿಗಳರಿಯುವವರು ಯೋಗಿಗಳಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 429

ಆ॥ವೆ॥ ಆರು ಮೂರು ಕಟ್ಟಿ, ಅಳುಕದೆ ನೀನಿಂತು
ಗುಣಗಳನ್ನು ಜಯಿಸಿ ಅಣಕದಿರಿಸಿ
ತೇರು ಶಿಖರವೇರಿ ಸ್ಥಿರತೆಯಿಂದಲಿ ಕಾಣು
ವಿಶ್ವದಾಭಿ ರಾಮ ವೇಮ ತಿಳಿಯೊ 430

ಆ॥ವೆ॥ ಕಳ್ಳರಾರು ಜನರ ಕಟ್ಟಿ, ಬಂಧನಗೈದು
ಓರ್ವನ ಪಥದಲ್ಲೆ ಹೊಡೆದು ಕ್ಷಮಿಸಿ
ನಿರ್ಗುಣಾತ್ಮನಾಗು ದುರ್ಗಮವಿದು ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 431

ಆ॥ವೆ॥ ಮನುಜನಾದರೇನು, ಮಾಧವಾದರೇನು,
ತಾತ್ವಿಕಾದರೇನು ಧರಣಿಯಲ್ಲಿ

ಆ॥ವೆ॥ ಅಚಲ ತತ್ವವೆನಲು ಅನುಭವಗಮ್ಯವು
ಸೂಚಿಸಲದುಬರದು ಸೂಕ್ಷ್ಮವಿಹುದು
ಮನದಲಿ ಹೊಳೆಯುವದು ಮರ್ಮ ಬಿಚ್ಚಬರದು
ವಿಶ್ವದಾಭಿ ರಾಮ ವೇಮ ತಿಳಿಯೊ 433

ಆ॥ವೆ॥ ಅಲ್ಪ ಸುಖಗಳನ್ನು ಆಶೆ ಮಾಡುವ ನರ
ಬಹಳ ದುಃಖದಿಂದ ಬಾಧೆ ಪಡುವ
ಪರದಲಿ ಸುಖ ಪಡುವ ಬಾಳ್ವೆಮಾಡಲು ಒಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 434

ಆ॥ವೆ॥ ಅಲ್ಲಿಯಿಲ್ಲಿಯೆನದೆ ಎಲ್ಲವು ತಾತುಂಬಿ
ಅವನಿಯಲ್ಲಿ ವಿಷ್ಣು ಹರಡಿ ಇರುವ
ಚಕ್ರವಿಡಿದು ಕಾಯ್ವ ಚಕ್ರಿ ಹಿನ್ನೆಲೆ ನಿಂತು
ವಿಶ್ವದಾಭಿ ರಾಮ ವೇಮ ತಿಳಿಯೊ 435

ಆ॥ವೆ॥ ಅನ್ನದಾನದಿಂದ ಅಧಿಕ ಸಂಪದೆಯಕ್ಕು
ಅಮರ ಲೋಕಪೂಜ್ಯವಹುದು ಮೀರಿ
ಅನ್ನವಹುದು ಬ್ರಹ್ಮವದು ಕಾಣದಿಹರಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 436

ಆ॥ವೆ॥ ಅಡಿಕೆ, ಎಲೆಯು, ಸುಣ್ಣ, ಅವು ಬಣ್ಣಗಳು ಮೂರು,
ಸೊಂಪಿನಲಿ ಕಲೆತರೆ ಕೆಂಪು ಮೂಡು
ವಂತೆ ತ್ರಿಗುಣದಿಂದಲಾದೈವ ಶೋಭಿಪ
ವಿಶ್ವದಾಭಿ ರಾಮ ವೇಮ ತಿಳಿಯೊ 437

ಆ॥ವೆ॥ ಕಾಶಿಯಾತ್ರೆ, ಮಾಡಿ ಗಾಸಿ ಬೀಳ್ವುದಷ್ಟೆ,

ಧೀರಚಿತ್ತರಾದ ದೇಹಧಾರಿಗಳಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 439

ಆ॥ವೆ॥ ಪರಮ ಪಂಚವರ್ಣ ಪಂಚಾಕ್ಷರೀ ಮಂತ್ರ
ಪಠಿಸೆ ಪೂರ್ವಜನ್ಮ ಪಾಪ ನಶಿಸು
ಅಮಲ ಜ್ಞಾನ ಹೆಚ್ಚಿ ಭ್ರಮೆಗಳನ್ನು ಹರಿಸು
ವಿಶ್ವದಾಭಿ ರಾಮ ವೇಮ ತಿಳಿಯೊ 440

ಆ॥ವೆ॥ ಜೀವನೊಳಗೆ ಆತ್ಮ ಸ್ಥಿರವನ್ನು ಅರಿಯದೆ
ನರನು ಅಸ್ಥಿರವನು ನಂಬಿ ಕೆಡುವ
ಸ್ಥಿರವನಸ್ಥಿರವನು, ತಿಳಿಯೆ ಜೀವನ್ಮುಕ್ತಿ
ವಿಶ್ವದಾಭಿ ರಾಮ ವೇಮ ತಿಳಿಯೊ 441

ಆ॥ವೆ॥ ಜೀವರೆಲ್ಲ ಮೊದಲೆ, ಜೀವಾತ್ಮ ಪರಮಾತ್ಮ
ಯುಗಳವರಿಯಲಘುದ ಉದಧಿಬಿಳರು
ನಾವೆ ನಡಿಸುವವನು ನದಿಯಲ್ಲಿ ಮುಳುಗನು
ವಿಶ್ವದಾಭಿ ರಾಮ ವೇಮ ತಿಳಿಯೊ 442

ಆ॥ವೆ॥ ಅರಿವು ಮರೆವ ಜೀವಿ ಚಿರಕಾಲವಿರಲೇನು
ಜನನ ಮರಣಗಳವು ಸಹಜವಲ್ತೆ
ಅರಿವು ಮರೆವ ತಲವು ಅರಿಯಲು ತಾಬ್ರಹ್ಮ
ವಿಶ್ವದಾಭಿ ರಾಮ ವೇಮ ತಿಳಿಯೊ 443

ಆ॥ವೆ॥ ತನುವನಳಿಸಿ, ದೇಹದನುಬಂಧವ ಮರೆತು
ಪರಮನಲ್ಲೆ ಮನಸು ಬಯಲು ಮಾಡಿ

ಆ॥ವೆ॥ ಕಾಯಧರ್ಮವರಿತು ಕಪಟ ವೃತ್ತಿಯ ಬಿಟ್ಟು
ಮಡದಿ ಮಕ್ಕಳೆಂಬ ಮಮತೆ ಬಿಟ್ಟು
ಇಚ್ಛೆಯಿಂದ ಶಿವನನೆಚ್ಚತ್ತು ಕಾಣಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 445

ಆ॥ವೆ॥ ದೇಹವಾರವಸ್ತು ಮೋಹದಿಂ ಬೆಳೆಸಲು
ಹಣವು ಯಾರವಸ್ತುವವಚಿಯಿಡಲು
ಪ್ರಾಣ ಯಾರವಸ್ತು ಪಾರಿ ಪೋಗದಿರಲು
ವಿಶ್ವದಾಭಿ ರಾಮ ವೇಮ ತಿಳಿಯೊ 446

ಆ॥ವೆ॥ ನಾನು ನೀನು ಎಂಬ ಹೀನವಾಕ್ಯವ ಬಿಟ್ಟು
ಸ್ವಸ್ತಿ ಹೇಳಲವನು ಸಾಧುವಕ್ಕು
ನಾನು ಎಂಬ ತಮವ ನಾಶಗೈಯ್ಯಲೆಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ 447

ಆ॥ವೆ॥ ನೀನು ನಾನು ಎನುವ ನೆತ್ತದ ಮಾತನ್ನು
ಮಾಣುವವನು ಬಹಳ ಮಾನನೀಯ
ತಾನು ನಾನು ಎಂಬ ತಾಮಸ ಬಿಡಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ 448

ಆ॥ವೆ॥ ಪರವ ಕೋರದಂಥ ಪಾಮರ ಜನರಿಗೆ
ಸ್ಥಿರತೆಯಿರುವ ಬುದ್ಧಿ ಸಿಗುವದಿಲ್ಲ
ಹಿಡಿಯಲಾಗದ ಪರವೆಂದರೆ ಬಲು ಹೇಸಿ

[illegible]
ಅಮೃತದ ರುಚಿಯನ್ನು ಹಸ್ತವು ತಿಳಿವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 451

ಆ॥ವೆ॥ ಪಂಚ ಶತ್ರುಗಳನ ಪಂಚ ಬಾಣನ ಗೆದ್ದು
ಪಂಚ ವರ್ಣ ಮಂತ್ರ ಪಠಿಸುತಿರಲು
ಪಂಚ ಮುಖನ ನೆಲೆಯ ಸಂಚಾರ ನಿನಗಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 452

ಆ॥ವೆ॥ ಪ್ರಣವ ಮಂತ್ರ ಮಹಿಮೆ ಭಾವಿಸೆ ಲಿಂಗವು
ಮೂರು ಮೂರ್ತಿಗಳಲಿ ತೋರುತಿಹುದು
ಆತನರಸಿ ಭಜಿಸಲನ್ಯರಿಗಳವಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 453

ಆ॥ವೆ॥ ಪ್ರಣವವನ್ನರಿಯದೆ ಭಕ್ತನಾಗುವದಿಲ್ಲ
ಜ್ಯೋತಿಯನ್ನರಿಯದೆ ಯೋಗಿಯಲ್ಲ
ನಿತ್ಯವನ್ನರಿಯದೆ ನಿರ್ವಾಣಿಯಾಗನು
ವಿಶ್ವದಾಭಿ ರಾಮ ವೇಮ ತಿಳಿಯೊ 454

ಆ॥ವೆ॥ ಪ್ರಭುವಿಗೆ ಕೊಡುವಂತೆ ಬಡವಂಗೆ ನೀಡರು
ತರುಣಿಗೆ ಕೊಡುವಂತೆ ತಿರುಕಗಿಡರು
ಮದ್ಯಕೆ ಕೊಡುವಂತೆ ಮತಿಮಂತರಿಗಿಡರು
ವಿಶ್ವದಾಭಿ ರಾಮ ವೇಮ ತಿಳಿಯೊ 455

ಆ॥ವೆ॥ ಪುಣ್ಯವತಿ ದೊರೆವಳು ಪುರುಷನ ಭಾಗ್ಯದಿ
ಪುಣ್ಯ ಶೀಲೆಗಂತೆ ಪುರುಷ ದೊರೆವ

॥ವೆ॥ ಬ್ರಹ್ಮವೇತ್ತರೆಂದು ಪೌರುಷ ನುಡಿದೀರಿ
ಬ್ರಹ್ಮವೆಂದರದರ ಭಾವವೇನು
ಬಿಳುಪೊ, ಕಪ್ಪೊ, ಕೆಂಪೊ, ತಿಳಿದರೆ ಹೇಳಿರಿ
ವಿಶ್ವದಾಭಿ ರಾಮ ವೇಮ ತಿಳಿಯೊ 457

॥ವೆ॥ ಮರಗಳಲ್ಲಿ ಅಗ್ನಿ ಮಡಗಿರಲು ಬಹುದು
ಮರವು ಅಗ್ನಿಯಲ್ಲಿ ಇರಲು ಬರದು
ಮರದಲಿರುವ ಅಗ್ನಿ ಹಿರಿಮೆಯ ಸಂಸಾರಿ
ವಿಶ್ವದಾಭಿ ರಾಮ ವೇಮ ತಿಳಿಯೊ 458

॥ವೆ॥ ಮನಸಿನಲ್ಲಿ ಶಿವನ ಮಾಣದೆ ಇರಿಸಲು
ಯೋಗಿ ಯಾಗುವನವ ಉರ್ವಿಯಲ್ಲಿ
ಶಿವನ ನೆನೆಯದಂಥ ಚಿತ್ತವದೇತಕೋ ?
ವಿಶ್ವದಾಭಿ ರಾಮ ವೇಮ ತಿಳಿಯೊ 459

॥ವೆ॥ ಮಣ್ಣು ಮಡಿಕೆಯಂಥ ಮಾಯಾಶರೀರವು
ಅಮರವಾದುದಲ್ಲ ಆತ್ಮವಮರ
ಘಟವು ಪೋಗೆ ಹಿಂದೆ ಗಗನವು ಪೋಪುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 460

॥ವೆ॥ ಸವತಿ ತಾಯಿ ಮಡಿಲು, ಸಾಕಷ್ಟು ಕಿರುಕುಳ,
ಸ್ವಂತ ತಾಯಿಯಂತೆ ಸಹನೆ ಬರದು,
ಬೆರಗನಡಚಿ ಆತ್ಮ ವಿಜ್ಞಾನವನು ಹೊಂದು

ಧನ ಸುರಿಸಲು ಸೂಳೆ ಮನೆಯಲಿಹಳು
ಧ್ಯಾನ ಮಾಡಲು ಹರಿ ತನ್ನ ಕಾಯುತಿಹನು
ವಿಶ್ವದಾಭಿ ರಾಮ ವೇಮ ತಿಳಿಯೊ 463

ಆ||ವೆ|| ವಾಯು ಗಗನದಲ್ಲಿ ವ್ಯಾಪಿಸಿ ಇದ್ದಂತೆ
ಮರದೊಳಗ್ನಿ ಅಡಗಿ ಇರುವ ತೆರದಿ
ಸರ್ವರೂಪನಾಗಿ ಸರ್ವೇಶ ಮೆರೆವನು
ವಿಶ್ವದಾಭಿ ರಾಮ ವೇಮ ತಿಳಿಯೊ 464

ಆ||ವೆ|| ಅಚಲ ಯೋಗ ತಪವನಂಟಲು ಯತ್ನಿಸಿ
ಪ್ರಕಟವಾದ ಕಾಂತಿ ಪಡೆಯಬೇಕು
ಮಾಯೆ ಜಯಿಸಿದಾಗ ಮಹನೀಯ ನೀನಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 465

ಆ||ವೆ|| ಅನ್ನವೇ ಅಮೃತವು, ಅದುಮುಸರೆನ್ನುತ,
ದ್ವಿಜರು ಆಡುತಿಹರು ತಿಳಿಯದಂತೆ
ಅನ್ನವಮೃತವಿದುವೆ, ಹರಿ ಹರ ಬ್ರಹ್ಮರು
ವಿಶ್ವದಾಭಿ ರಾಮ ವೇಮ ತಿಳಿಯೊ 466

ಆ||ವೆ|| ಆತ್ಮ ತೇಜ ಹೊಂದಿ ಅನುಭವಿಸಲು ಮುಕ್ತಿ
ಆತ್ಮ ತತ್ವ ತಿಳಿಯುವವನೆ ಯೋಗಿ
ಅರಿತು ಬೆರೆತ ಮೇಲೆ ಆತ್ಮದರ್ಶನವುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ 467

ಆ||ವೆ|| ಆತ್ಮದೊಳಗೆ ಶಿವನನನುವಿಂದ ಶೋಧಿಸಿ

ಆ॥ವೆ॥ ಅಂಜನವನು ಕಣ್ಣಿಗಂಟಿಸಿ ನೋಡಲು
ಮರೆಯಲಿರುವ ನಿಧಿಯು ದೊರೆವ ತೆರದಿ
ಗುರುಕೃಪೆಯನು ಪಡೆದು ಕರುಣಾತ್ಮನೀನಾಗು
ವಿಶ್ವದಾಭಿ ರಾಮ ವೇಮ ತಿಳಿಯೊ 469

ಆ॥ವೆ॥ ಅನ್ಯರ ಸಿರಿಗಾಗಿ ಅಲೆದಾಟ ಪಡದಂಥ
ಪುರುಷನವನಿಯಲ್ಲಿ ಪುಣ್ಯಮೂರ್ತಿ
ಅನ್ಯರ ಧನದಾಸೆ ಅತಿಪಾಪಸಂಚಿತ
ವಿಶ್ವದಾಭಿ ರಾಮ ವೇಮ ತಿಳಿಯೊ 470

ಆ॥ವೆ॥ ಈಜಬಹುದು ಹೊಳೆಯ ಏನು ಬಾಧೆಯಿರದೆ
ಗುರುವು ಇರದೆ ತತ್ವ ಗುರಿಗೆ ಬರದು
ನುರಿತ ಮನದಿ ಕಾಣು, ಕೊರವಂಜಿ ಕಣಿಯೇಕೆ
ವಿಶ್ವದಾಭಿ ರಾಮ ವೇಮ ತಿಳಿಯೊ 471

ಆ॥ವೆ॥ ಕಪಟವನ್ನು ತೊರೆದು, ಘನಗುರು ಕೃಪೆಯಿಂದ
ಭಕ್ತಿ ಪಾರವಶ್ಯ ಪಡೆಯಲವಗೆ
ತಪವು ಮಾಡಿದಂಥ ಧನ್ಯತೆ ಫಲವಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ 472

ಆ॥ವೆ॥ ಕೆಟ್ಟ ಗುಣಗಳೆಲ್ಲ ಕಟ್ಟಿ ಶಿಕ್ಷಣ ಕೊಟ್ಟು
ಪರಮ ಪದವ ಸಿದ್ಧಪಡಿಸಿ ತೋರು
ವಂಥ ಗುರುವಿನಿಂದ ಅಪರೋಕ್ಷವನು ಹೊಂದು
ವಿಶ್ವದಾಭಿ ರಾಮ ವೇಮ ತಿಳಿಯೊ 473

ಆ॥ವೆ॥ ತಾಮಸದಲಿ ಕಾರ್ಯ ನೀ ಮಾಡದಿರಬೇಕು

ವಿಶ್ವದಾಭಿ ರಾಮ ವೇಮ ತಿಳಿಯೊ 475

ಆ॥ವೆ॥ ಗುರಿವಿನ ನೆರವನ್ನು ಕೂಡಿಯಿದ್ದಾತನು,
ಬ್ರಹ್ಮವನ್ನರಿಯುವ ಭಾಗ್ಯ ಪಡೆವ,
ಮರ್ಮವರಿತ ಮೇಲೆ ಮರೆಯು ಇರುವದಿಲ್ಲ,
ವಿಶ್ವದಾಭಿ ರಾಮ ವೇಮ ತಿಳಿಯೊ 476

ಆ॥ವೆ॥ ಗುರುವು ಸಿಗಲು, ಆತ್ಮದರಿವು ಸಿಗುವದೆಂದು
ಕಾಲವೆಲ್ಲ ರಿಕ್ತ ಕಳೆಯಬೇಡ,
ಗುರು ಸಿಗುವ ಸಮಯಕೆ ಮರಣ ಬರುವದೇನೊ ?
ವಿಶ್ವದಾಭಿ ರಾಮ ವೇಮ ತಿಳಿಯೊ 477

ಆ॥ವೆ॥ ಧರೆಯಲಿ, ಮನತುಂಬಿ ಗುರುಸೇವೆ ಮಾಡಲು,
ಪರವ ತೋರಿ, ಆತ್ಮದರಿವು ಕೊಡುವ
ಶುದ್ಧ ಬುದ್ಧಿಯಿಂದ, ಸಿದ್ಧನಾಗಲು ನೋಡು
ವಿಶ್ವದಾಭಿ ರಾಮ ವೇಮ ತಿಳಿಯೊ 478

ಆ॥ವೆ॥ ಜನನ, ನಿಧನಗಳೆನೆ ಸ್ವಪ್ನ ನಿದ್ರಾವಸ್ಥೆ
ಜಗಗಳಿರುವವು ಮೃಗಸಲಿಲದಂತೆ
ನರನು ಜಗವ ಬಯಸೆ, ನಗೆಗೇಡಿತನವಲ್ತೆ,
ವಿಶ್ವದಾಭಿ ರಾಮ ವೇಮ ತಿಳಿಯೊ 479

ಆ॥ವೆ॥ ಜ್ಞಾನವಂತನನ್ನು ಕರ್ಮಸಂಬದ್ಧರು
ಹುಚ್ಚೆನುವರು ಪ್ರಕೃತಿ ಹುಚ್ಚು ಹಿಡಿದು
ಜ್ಞಾನಿ ಅರಿಯದಂಥದೇನಿಲ್ಲ ಜಗದಲ್ಲಿ

ವಿಶ್ವದಾಭಿ ರಾಮ ವೇಮ ತಿಳಿಯೊ 481

||ವೆ|| ತಾನೆ ಗುರುವು ಆಗಿ ತಾಳ್ಮೆಯ ಗುಣಬಿಟ್ಟು
ಚಂದ್ರಮಂಗೆ ಕೊಟ್ಟ, ಶಾಪವನ್ನು
ಗುರುವು, ಕೋಪವಳಿಪ, ಗುಣವಿರುವುದೆ ಲೇಸು
ವಿಶ್ವದಾಭಿ ರಾಮ ವೇಮ ತಿಳಿಯೊ 482

||ವೆ|| ಧರ್ಮಕೆ ಕೆಡುಕನ್ನು ತರಬಯಸುವವನು
ಹಿರಿಯನಿದ್ದರು ಅವ ಹೀನನಕ್ಕು
ಗುರುಧನವ ಬಯಸುವ ನರನಾಶವಾಗನೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 483

||ವೆ|| ದಾತನಿಲ್ಲದ ಮನೆ ಭೂತವಿರುವ ಬೀದಿ
ನೀತಿಯಿರದ ಹಾಡು ಮೋತಿಗೇಡು
ಪ್ರೀತಿಯಿರದ ಸೂಳೆ ಪ್ರೇತ ವಾಹನವಲ್ತೆ?
ವಿಶ್ವದಾಭಿ ರಾಮ ವೇಮ ತಿಳಿಯೊ 484

||ವೆ|| ದಾನಗಳಲಿ ಅನ್ನದಾನವೇ ದೊಡ್ಡದು
ಜನನಿ ಜನಕರಂಥ ಘನರು ಇಲ್ಲ
ಗುರುವಿಗಿಂತ ಅಧಿಕವಿರುವುದಾವುದು ಇಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 485

||ವೆ|| ತಾಯಿ ತಂದೆಯಲ್ಲಿ ದಯೆ ತೋರದಾ ಪುತ್ರ
ಜನ್ಮವೆತ್ತಲೊಂದೆ ಸತ್ತರೊಂದೆ
ಹುತ್ತಿನಲ್ಲಿ ಗೆದ್ದಲುದಿಸವೇ ಸಾಯವೇ
ವಿಶ್ವದಾಭಿ ರಾಮ ವೇಮ ತಿಳಿಯೊ 486

ನಿಜವ ಹೇಳುವವನು ನೀತಿವಂತ
ನಿಜವನಾಡದವನು ನೀಚ ಚಂಡಾಲನು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ನಿಜವ ನುಡಿವ ಜನಕೆ ವಿಜಯವೇ ಭುವಿಯಲ್ಲಿ
ಗೊಂದಲವ ತರುವುದು ಕುಜನಕಿದುವೆ
ಸುಜನರಾದವರಿಗೆ ನಿಜವೆಂದರೇ ಪ್ರೀತಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ನೆರಳನಿಕ್ಕುವ ಮರ ನೆರೆಪೋಗೆ ಫಲವಿಕ್ಕು
ಸಾಧು ಪುಂಗವ ವರ ಜ್ಞಾನವಿಕ್ಕು
ಹಾಗೆ ಹೀಗೆ ಪೋಗಲದು ಇಲ್ಲವಿದು ಇಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಪೊಲತಿ ಕುಚಗಳನ್ನು ಪೂವು ಚೆಂಡುಗಳಿಗೆ
ಹೋಲಿಸುವರು ಭ್ರಾಂತಿ ಹೊಂದಿದವರು
ಮಾಂಸ ಖಂಡವಷ್ಟೆ ಮತ್ತೇನಿರುವುದಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಭಕ್ತಿಯು ಇರುವಲ್ಲಿ ಪರಮೇಶನಿರುವನು
ಭಕ್ತಿಯಿರದ ಸ್ಥಲದಿ ಪಾಪವಿಹುದು
ಭಕ್ತಿಯಿರುವ ನರನು ಪರಮಾತ್ಮನಾಗುವ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮನದಲಿ ಜನಿಸುವವು ಮಂಕು ಕೋರ್ಕೆಗಳೆಲ್ಲ
ಕೋರ್ಕೆಗಳಿರು ಮನವು ಕುದುರು ಇರದು

ಮಡದಿ ಮಾದಿಗಳಿರೆ ಮೌನಿವಿಪ್ರನದೆಂತು ?
ವಿಶ್ವದಾಭಿ ರಾಮ ವೇಮ ತಿಳಿಯೊ 493

ವೆ|| ಮುದದಿ ತಾಯಿತಂದೆ, ಮೊದಲನೆ ಗುರುಗಳು
ಹರನು ಗಿರಿಜೆ ಪರಮ ವರಗುರುಗಳು
ಕೂಲಿಗರನು ಜಗದಿ ಗುರುಗಳೆಂದರೆ ದ್ರೋಹ
ವಿಶ್ವದಾಭಿ ರಾಮ ವೇಮ ತಿಳಿಯೊ 494

ವೆ|| ವಾಕ್ಕಿನಿಂದಲಕ್ಕು ಪಾವನಕೈವಲ್ಯ
ವಾಕ್ಕಿನಿಂದ ಘನತೆ ವಸುಧೆಯಲ್ಲಿ
ವಾಕ್ಕಿನಿಂದ ಬಹಳ ಬರುವುದೈಶ್ವರ್ಯವು
ವಿಶ್ವದಾಭಿ ರಾಮ ವೇಮ ತಿಳಿಯೊ 495

ವೆ|| ಶಿಷ್ಯಧರ್ಮವರಿತು ಶಿಷ್ಟ, ಭಕ್ತಿಯು ತುಂಬಿ
ಮಾನಿತ ಗುರುಸೇವೆ ಮಾಡುತಿರಲು
ಸರ್ವ ಮರ್ಮದರಿವು ಸರಳವಾಗಿರುವದು
ವಿಶ್ವದಾಭಿ ರಾಮ ವೇಮ ತಿಳಿಯೊ 496

ವೆ|| ಶಿಕ್ಷಣ ಗುರು ಕೊಡದೆ, ಸಿಗುವದೇ ತತ್ವವು,
ಅಜನೆ ಇರಲಿ, ಅವನ ಅಪ್ಪನಿರಲಿ,
ಬೀಗದ ಕಯಿಯಿರದೆ ಬಾಗಿಲು ತೆರೆವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 497

ವೆ|| ಸತ್ಯ ಸುಳ್ಳು ಎರಡು ಸಾಂಬಶಿವಗೆ ಗೊತ್ತು
ಮಾತು ಸತ್ಯವಿರದೆ ನೀತಿಯಿರದು

ಗುರುವಿನಿಂದಲಂತ, ಕೋವಿದನಹ
ಸಾಧು ಸಜ್ಜನಾಳಿ ಸಂಗವಿಂತಿರುವದು
ವಿಶ್ವದಾಭಿ ರಾಮ ವೇಮ ತಿಳಿಯೊ 499

ಆ॥ವೆ॥ ಕನಿಪ ರತ್ನಹಾರ, ಕಾಂಚನ ಮೊದಲಾದ,
ಸಂಪದೆಯಿರುವವನು, ಜಗತಿಯಲ್ಲಿ,
ಹೀನ ಕುಲಜನಿರಲಿ, ಮಾನಿತನೆನುವರು,
ವಿಶ್ವದಾಭಿ ರಾಮ ವೇಮ ತಿಳಿಯೊ 500

ಆ॥ವೆ॥ ಇಹದಿ ವ್ಯಥೆಗಳನ್ನು ಎನಿತು ಪಟ್ಟರು ಕೂಡ,
ಪರಮ ಸಾದರಾರ್ಥ ಪಥವದಲ್ಲ,
ಗುರು ಕೃಪೆಯಲಿ ಮೀರಿ, ಗುರ್ತಿಸಿ ನೀಕಾಣು
ವಿಶ್ವದಾಭಿ ರಾಮ ವೇಮ ತಿಳಿಯೊ 501

ಆ॥ವೆ॥ ಇಹವ ಬಿಡಲು ಫಲಗಳಿಂಪಾಗಿರುವವೆಂದು
ಮಹಿಯಲಾಡುವವರ ಮಾತು ಸುಳ್ಳು
ಪರವು ಸೇರಲಿಹದಿ ವರಸಾಧನೆಗಳುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ 502

ಆ॥ವೆ॥ ಉಚಿತ ಭಕ್ತಿಯಿಂದ ಉಚಿತ ಬುದ್ಧಿ ಪಡೆದು
ಸ್ಥಿರತೆಯಿಂದಲೊಪ್ಪಿಯಿರುವ ತೆರದಿ
ಉಚಿತ ಬೋಧೆಯಿಂದ ಸುಚರಿತ್ರನಾಗುವ
ವಿಶ್ವದಾಭಿ ರಾಮ ವೇಮ ತಿಳಿಯೊ 503

ಆ॥ವೆ॥ ಆಗರು ಗುರುವುಗಳು, ಅಕ್ಷರ ತಿದ್ದಿಸಿ

ಆ॥ವೆ॥ ಅನ್ನ ಕೇಳುವಂಗೆ ಅನ್ನವ ನೀಡದೆ
ಬಯಲಿನಲ್ಲೆಸೆದರೆ ಫಲಿತವೇನು
ಧನಿಕನಾದವಂಗೆ ದಾನವ ಕೊಟ್ಟಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ 505

ಆ॥ವೆ॥ ಆಶೆಯೆಂಬ ಹಗ್ಗಕಖಿಲಜನಂಗಳು
ಕಟ್ಟಿ ಬಿದ್ದು ಮುಕ್ತಿ ಕಾಣಲಿಲ್ಲ
ಜ್ಞಾನ ಖಡ್ಗದಿಂದ ಖಂಡಿಸಬಾರದೇ
ವಿಶ್ವದಾಭಿ ರಾಮ ವೇಮ ತಿಳಿಯೊ 506

ಆ॥ವೆ॥ ಆಶೆ ಪಾಶವನ್ನು ನಾಶ ಮಾಡಿರುವನ
ಚಿತ್ತವು ಗುರುವನ್ನು ಸೇರಿ ಇಹುದು
ಮೋಹ ಪಾಶ ಬಿಡದೆ ಮುಕ್ತಿ ಕಾಣುವನೆಂತು ?
ವಿಶ್ವದಾಭಿ ರಾಮ ವೇಮ ತಿಳಿಯೊ 507

ಆ॥ವೆ॥ ಆಡು ಕತ್ತಿನ ಮೊಲೆ ಆಶೆಯಿಂದುಣ್ಣಲು
ಹಸಿವು ತೀರದು ಬರಿ ಆಶೆಯಲ್ತೆ
ಜಿಪುಣನಾಶಿಸಿದರೆ ಸಿಗುವುದೇ ಲಾಭವು ?
ವಿಶ್ವದಾಭಿ ರಾಮ ವೇಮ ತಿಳಿಯೊ 508

ಆ॥ವೆ॥ ಆಶೆಯಿದ್ದ ನರನ ಆಶ್ರಯಿಸಲು ಬೇಡ
ಆಶೆ ತೀರಲು ಕೊಡುವವನ ಕೇಳು
ಆಶೆಯಿರುವ ತನಕ ಅಮಲನಾಗುವನೆಂತು
ವಿಶ್ವದಾಭಿ ರಾಮ ವೇಮ ತಿಳಿಯೊ 509

ಆ॥ವೆ॥ ಆಶೆಗೊಂಡು ಲೋಭಿಯನ್ನು ಹಿಂಬಾಲಿಸೆ

ಕಾಶಿ ವಾಸರಿರಲಿ ಕಾಣರು ಕೈವಲ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆಶೆಗಿಂತ ದುಃಖವಧಿಕವಾವುದು ಇಲ್ಲ,
ನೋಟ ನಿಲಿಸದೆ, ಸುಖದಾಟವಿಲ್ಲ
ಮನವ ನಿಲಿಸದಿರಲು ಮತ್ತೆ ಮುಕ್ತಿಯು ಇಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆಶೆಯಿಂದ ಮನುಜರಾಯುವಿರುವ ತನಕ
ತಿರುಗುತಿಹರು ಭ್ರಮೆಯ ತಿರುಳರಿಯದೆ
ಮುಸುರೆ ಗಡಿಗೆ ಸುತ್ತ ಮುತ್ತೊ ನೊಣಗಳಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಆಶೆ ಪಾಪಜಾತಿಯಹುದು ಎಲ್ಲಕ್ಕಿಂತ
ಯತಿಗಳಾಶೆಯಿಂದ ಮತಿಯು ಗೆಡರೆ
ಅರಿತು ಬಿಡುವ ಜನರು ಆತ್ಮಸ್ವರೂಪರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಭದ್ರ ಪದವಿಗಳಲಿ, ಬಹಳ ಓದುಗಳಲ್ಲಿ,
ತುರುಗಳಲ್ಲಿ, ನಲ್ಲೆ ತುಟಿಗಳಲ್ಲಿ,
ಆಶೆ ನಾಶಗೈದ ಅಯ್ಯರೇ ಮುಕ್ತರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಕಲ್ಲಿನ ಬಸವಂಗೆ ಕೈಮುಗಿಯುತಿಹರು,
ದುಡಿವ ಬಸವನನ್ನು ಹೊಡೆಯುತಿಹರು

ಮೃಡನ ನೋಡಬಿಡದು ಮೀರು ನೀನದರನ್ನು
ವಿಶ್ವದಾಭಿ ರಾಮ ವೇಮ ತಿಳಿಯೊ 517

ತ॥ವೆ॥ ಕಾಶಿ, ಮಧುರೆ, ಕಂಚಿ, ಗಯೆ, ಪ್ರಯಾಗಗಳನ್ನು
ಸುಮ್ಮನಾಶೆಯಿಂದ ಸುತ್ತಲೇಕೆ ?
ಭಕ್ತಿ ಗಂಧವಿರದೆ ಮುಕ್ತಿ ಬರುವದೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ 518

ತ॥ವೆ॥ ಕಾಲುಗಳಿಗೆ ನಿಗಳ ಕೈಹಿಡಿದಾ ಕಾಂತೆ,
ಬೇಡಿಗಳು ಶಿಶುಗಳು ಜೋಡು ಕೈಗೆ,
ಸರಿಯದುವೆ ಸೆರೆಮನೆ, ಸಂಸಾರ ಕೂಪವು
ವಿಶ್ವದಾಭಿ ರಾಮ ವೇಮ ತಿಳಿಯೊ 519

ತ॥ವೆ॥ ಕಪ್ಪಗಿಹುದು, ಮೇಲೆ ಕಾಣಲು ಕಸ್ತೂರಿ,
ಸಾರ ಸೌರಭವದು ಸಾರುತಿಹುದು
ಗುರುಗಳಾದ ಜನರ ಗುಣವಿಹುದೀ ರೀತಿ
ವಿಶ್ವದಾಭಿ ರಾಮ ವೇಮ ತಿಳಿಯೊ 520

ತ॥ವೆ॥ ವ್ಯಾಧಿ ತಿಳಿಯದಂಥ ವೈದ್ಯವದೇತಕೆ
ಕೊರತೆ ತಿಳಿಯದಂಥ ಕೋರ್ಕೆಯೇಕೆ ?
ಮನವನರಿಯದಂಥ ಮರ್ಮಜ್ಞರೇತಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 521

ತ॥ವೆ॥ ಚಿತ್ತವೆಂಬ ಬೇರು ಶಿಥಿಲವಾದಾಗಲೆ
ಪ್ರಕೃತಿವೃಕ್ಷ ಪತನವಕ್ಕು, ಉಪರಿ

ಪತಿ ಸತಿಯರಿಂಗೆ, ಧನ ಸುತರು ಬೇಕು
ಅಗ್ನಿ ದೇವರಿಂಗೆ ಅರಿಯಲೆಲ್ಲರು ಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತನ್ನರಸನ ಕೂಡ ತನ್ನಾಯುಧದ ಕೂಡ
ಪರಸತಿಯರ ಕೂಡ, ಉರಿಯಕೂಡ
ಹಾಸ್ಯವಾಡುತಲಿರೆ, ಹಾನಿ ಪ್ರಾಣಕ್ಕುಂಟು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ತಂದೆಯ ಧನವಿರಲಿ, ದಾಯಾದಿದಾಗಲಿ,
ಪರರದಾದರಿರಲಿ, ಪ್ರಾಪ್ತ ಧನವು,
ದಯದಿ ದೀನರಿಗಿಡು, ದಾನವೇ ಪುಣ್ಯವು,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ದಾತನೊಂದಿಗೆ, ಕೊಡದಾತನು ಇದ್ದೊಡೆ,
ಸತ್ತರುಲಿವ ದಾನ ಸಾಗಗೊಡನು
ಕಲ್ಪರುಹದಡಿಯಲಿ, ಕಂಟಕಿಯಿದ್ದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಧನವ ಗಳಿಸಿ ಮನುಜ ದಾನವಮಾಡದೆ
ಮತ್ತೆ ತಿನದೆ ಮರೆಯ ಮಾಡಲೇಕೆ
ದಾರಿಗನಿಗೆ ನೊಣವು ತಾ ಜೇನು ಕೊಟ್ಟಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಧನವ ಕೂಡಿಸಿಟ್ಟು, ದಾನವಮಾಡದೆ

ಆ||ವೆ|| ತನ್ನಗಾಸಿ ತಿಳಿದು ದಾಟಲು ಬಯಸುವ
ಎಂಥ ಮನುಜನಿರಲಿ ಹೇಗೆ ಇರಲಿ
ನರಕ ಬಾಧೆ ಕೇಳಿಅರಿಯತಾಧರ್ಮವ
ವಿಶ್ವದಾಭಿ ರಾಮ ವೇಮ ತಿಳಿಯೊ 530

ಆ||ವೆ|| ನೀರಿನಲ್ಲಿ ಮೀನು, ನೆಗೆವುದು ಬಹುದೂರ
ನೆಲದ ಮೇಲೆ ಮೊಳವು, ಚಲಿಪುದಿಲ್ಲ
ನೆಲೆಯ ಬಲವೆ ಹೊರತು, ಬಲವು ತನ್ನದು ಅಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 531

ಆ||ವೆ|| ಬಂಧು ಬಳಗವಿಲ್ಲ, ಭಾರ್ಯಾ ಸುತರು ಇಲ್ಲ,
ಬಂಟರಿಲ್ಲ, ಆಪ್ತ ವರ್ಗವಿಲ್ಲ,
ಹಿಂದೆ ಯಾರು ಬರರು, ಈ ದೇಹ ಸುಡುವಾಗ
ವಿಶ್ವದಾಭಿ ರಾಮ ವೇಮ ತಿಳಿಯೊ 532

ಆ||ವೆ|| ಭಾಗ್ಯಹೀನನಾಗಿ ಬಾಳುತಲಿದ್ದಾಗ
ತಾಯಿ, ನಲ್ಲೆ, ಗೆಳೆಯ ತನಯರೆಲ್ಲ,
ಬಂಧು ಬಳಗ ಸಹಿತ, ವೈರಿಗಳಿದು ಸತ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 533

ಆ||ವೆ|| ಉಡಲು, ಮುಡಿಯಲಿರದೆ, ಉಣಲು, ತಂಗಲಿರದೆ,
ವಿದ್ಯೆಯಿಲ್ಲದೆ, ಭಯವಿಲ್ಲದಂಥ
ನಡತೆಯುಳ್ಳ ಅವನ ನಡೆವೆಣವೆಂಬರು,
ವಿಶ್ವದಾಭಿ ರಾಮ ವೇಮ ತಿಳಿಯೊ 534

ಗಾಳದಲ್ಲಿ ಸಿಲುಕಿ ಕಾಲವಕ್ಕು,
ಆಶೆಯಿಂದ ನರನು, ಅದರಂತೆ ಕೆಡುವನು,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸತಿಯು ರಂಭೆಯಿರಲಿ, ಸಾಧುಶೀಲೆಯಿರಲಿ,
ಜಾರ ತನ್ನ ಗುಣದ, ಜಾಡು ಬಿಡನು,
ಹೊಲೆಯ ಕೇರಿ ಚಟವು, ಹೋಗದು ಶುನಕಂಗೆ,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಮೊದಲು ಆಶೆ ತೋರಿ, ತುದಿಗಿಲ್ಲವೆನ್ನುವ,
ಪರಮ ಲುಬ್ಧರಾದ, ಪಾಪಿಗಳಿಗೆ,
ಬಡಿಯುವದದು ಉಸಿರು, ಪಗರಿನ ಪೆಟ್ಟಂತೆ,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಸಲಹ ಬೇಕು ಸತತ, ಸತಿಯನ್ನು ಪತಿದೇವ,
ಸಲಹಲಾರದವನು, ಸಾಯಬೇಕು,
ಸಲಹದಿರದ ಅವನ, ಸಂಸಾರ ಹಾಳಕ್ಕು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಲೋಭಿಯ ಕೊಲೆಯನ್ನು, ಲೋಕದೋಳ್ ಮಾಡಲು
ಮದ್ದು ಬೇಡ ಬೇರೆ ಮತವದುಂಟು
ಧನವ ಕೇಳಿದೊಡನೆ, ತಾಬಿದ್ದು ಮಡಿವನು,
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಲೋಭಿಧಾತನಾಗೆ, ಲೋಕದೋಳಾರನ್ನು,

ಆ॥ವೆ॥ ವಿಜಯನಾದ ನರನು, ಬಿಲ್ಲೆತ್ತಿದಾಗಲೇ,
ಮತ್ತ ಕುಜನರೆಲ್ಲ ಸತ್ತರಲ್ಲೆ
ಭಜನೆ ಗೈಯ್ಯಲು ನರ, ಪಾಲಿಸನೇ ಭರ್ಗ
ವಿಶ್ವದಾಭಿ ರಾಮ ವೇಮ ತಿಳಿಯೊ 541

ಆ॥ವೆ॥ ವೇದ ವಿದ್ಯೆಗಳವು, ವೇಶ್ಯೆಯರಂಥವು,
ಭ್ರಾಂತಿ ಗೊಳಿಸಿ, ತಿಳಿಯ ಬರಲು ಬಿಡವು
ಗುಪ್ತ ವಿದ್ಯೆಯೊಂದೆ, ಕುಲಸತಿಯಂತೊಪ್ಪು
ವಿಶ್ವದಾಭಿ ರಾಮ ವೇಮ ತಿಳಿಯೊ 542

ಆ॥ವೆ॥ ಶಿವನೆ ಬ್ರಹ್ಮವೆಂದು,ಸ್ಮೃತಿಗಳು ನುಡಿಯಲು
ಬ್ರಾಹ್ಮಣ ಪರರನ್ನು ಭಜಿಸಲೇಕೆ ?
ಹರನ ಭಕ್ತ ಜನರು ಅಗ್ರಜಾತಿಗಳಲ್ತೆ
ವಿಶ್ವದಾಭಿ ರಾಮ ವೇಮ ತಿಳಿಯೊ 543

ಆ॥ವೆ॥ ಶಾಂತವೇ ಜನರಿಗೆ, ಜಯವ ತಾ ಕೊಡುವುದು
ಶಾಂತವೆ, ಗುರುವಿರುವ ಜಾಡನರಹು,
ಶಾಂತ ಭಾವ ಮಹಿಮೆ, ಚರ್ಚಿಸಲಳವಲ್ಲ,
ವಿಶ್ವದಾಭಿ ರಾಮ ವೇಮ ತಿಳಿಯೊ 544

ಆ॥ವೆ॥ ವೇದ ಶಾಸ್ತ್ರಗಳನ, ಓದುತ್ತ ಬರೆಯುತ್ತ,
ತಿಳಿಯಬಹುದು, ಮರಣ ತಿಳಿಯಬರದು,
ಸಾವರಿಯದ ಓದು, ಸಾಧಿಸಿ ಫಲವೇನು,
ವಿಶ್ವದಾಭಿ ರಾಮ ವೇಮ ತಿಳಿಯೊ 545

ವೆ॥ ಹೆಣ್ಣ, ಅಣಗಿಸಿಡದೆ, ಹೇಡಿಯಂತೆ ಇರುತ
ಒಂದರಿಯೆನೆನುವದು ಹುಚ್ಚುತನವು,
ಚಿಕ್ಕಗಿಡ ಬಲಿತರೆ ಚಿವುಟಲು ಸಾಧ್ಯವೇ
ವಿಶ್ವದಾಭಿ ರಾಮ ವೇಮ ತಿಳಿಯೊ 547

ವೆ॥ ಜಲಜಭವನು ಮಾಳ್ಪ ಬಲುಸೃಷ್ಟಿಯೆಲ್ಲವು
ಭರಿಸುವ ಹರಿ, ಹರಿಸು ಹರನೆನುವರು
ಮೂರ್ತಿಗಳೆನಿತಿರಲಿ ಮೂಲವೊಂದಲ್ಲವೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 548

ವೆ॥ ಸಕ್ಕರೆಯನು ಬೆರಸಿ ಸಪ್ಪೆ ತೌಡಾದರು
ಉಣ್ಣ ಬಹುದು, ಅಂತೆ, ಒಲಿಮೆಯಿಡಲು
ಬಡಕಿ ತೊತ್ತುಕೂಡ, ಪಂಚಬಾಣನ ಗೊಂಬೆ
ವಿಶ್ವದಾಭಿ ರಾಮ ವೇಮ ತಿಳಿಯೊ 549

ವೆ॥ ಮೆರೆವ ಚಿನ್ನ ಕಂಡು ಮೀನ ಲೋಚನೆ ಕಂಡು
ತವಕ ಬೀಳುವಂಥ ತಾಮಸರಿಗೆ
ತತ್ವ ಸಾರ ಗುಣವು ತಾನೆಂತು ಸಿಗುವದು
ವಿಶ್ವದಾಭಿ ರಾಮ ವೇಮ ತಿಳಿಯೊ 550

ವೆ॥ ಕರುಣೆಯಿಲ್ಲದವಗೆ ಸಿರಿಯಿದ್ದು ಫಲವೇನು
ದುರುಳರಾದವರಿಗೆ ಸಿರಿಯದೇಕೆ
ಜೇನು ಕೂಡಿಪ ನೊಣ ಸಿಡಿದೆದ್ದು ಕಡಿಯದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 551

# 15. ಸ್ವಭಾವ ಪದ್ಧತಿ

ಆ॥ವೆ॥ ಅತ್ತಿಮರದ ಹಣ್ಣು ಅಂದವಾಗಿರುವದು
ಹೊಟ್ಟೆ ಬಿಚ್ಚಲೊಳಗೆ ಹುಳಗಳುಂಟು
ಪುಕ್ಕಗಿರುವದಿಂಥ ಬೂಟಾಟಿಕೆಯ ಬಿಂಕ
ವಿಶ್ವದಾಭಿ ರಾಮ ವೇಮ ತಿಳಿಯೊ 553

ಆ॥ವೆ॥ ಅನುತ ಅನುತರಾಗ ಅತಿರಮ್ಯವಿರುವುದು,
ತಿನಲು ತಿನಲು ಬೇವು ತೀಬದಹುದು,
ಸಾಧನದಲಿ ಕಾರ್ಯ ಸಾನುಕೂಲವು ನೋಡ
ವಿಶ್ವದಾಭಿ ರಾಮ ವೇಮ ತಿಳಿಯೊ 554

ಆ॥ವೆ॥ ಅನ್ನವುಣ್ಣಲಿಡದೆ ಅಧಿಕ ದಾನಂಗಳ,
ಎನಿತು ಮಾಡಲೇನು ಎಣಿಪರಾರು,
ಅನ್ನಜೀವನಕ್ಕೆ ಆಧಾರವಹುದಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 555

ಆ॥ವೆ॥ ಅನ್ನವಧಿಕ ತಿನಲು ಅಪಮೃತ್ಯು ಬರುವದು,
ಉಣುವುದನ್ನು ಬಿಡಲು ದಣಿವುದಾತ್ಮ
ಬೆಳೆಸಲಳಿಸಲನ್ನ ಬೇರೆ ಸಾಸಿರವೇಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 556

ಆ॥ವೆ॥ ಆಹ! ಸೃಷ್ಟಿಸಿದನು ಆ ಬ್ರಹ್ಮ ಹೆಣ್ಣನ್ನು
ಪುರುಷನಾದವಂಗೆ ಭೂತದಂತೆ
ನಲ್ಲೆ ಬಲೆಗೆ ಸಿಗದ ಬಲ್ಲಿದನಿರುವನೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 557

ಆ॥ವೆ॥ ಕಾಗೆ ಗೂಡಿನಲ್ಲಿ ಕೋಗಿಲೆ ತತ್ತಿಟ್ಟು
ಬೆಳೆಸುತಿರುವದಲ್ಲೆ ಕಳವಿನಿಂದ
ಕಾಮಿನಿಯರ ಕಪಟ ಕಾಣಲು ಬರುವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 560

ಆ॥ವೆ॥ ಅಂಗನೆ ತನುಕಂಡು ಆಶೆಯ ಪಡುವರು
ಹೊಟ್ಟೆಯಲಿರುವಂಥ ಹೊಲಸರಿಯದೆ
ಇಂಥ ಹೇಯವಾದ ಈ ದೇಹವೇತಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 561

ಆ॥ವೆ॥ ಕೆರದಲಿರುವ ಕಲ್ಲು, ಕಿವಿಯಲ್ಲಿನ ತೊಣಚಿ,
ಕಣ್ಣಿನಲ್ಲಿ ಕಸರು, ಕಾಲ ಮುಳ್ಳು
ಮನೆಯಲಿರುವ ಜಗಳ ಮತ್ತೆಷ್ಟೊ ಕಾಣಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 562

ಆ॥ವೆ॥ ಸೊರಗಿದ ಸಮಯದಲಿ ಉರುಸಿಂಹವಿರಲೇನು
ಬಡಕು ನಾಯಿ ಕಚ್ಚಿ ಬಾಧಿಸುವದು
ಬಲವು ಕುಂದಿದಾಗ ಪಂತವು ನಡೆಯದು
ವಿಶ್ವದಾಭಿ ರಾಮ ವೇಮ ತಿಳಿಯೊ 563

ಆ॥ವೆ॥ ಗಿಡದ ಹಾಲು ಬಹಳ ಕೆಡುಕೆಂಬರಿಳೆಯಲ್ಲಿ
ಎಮ್ಮೆ ಕೊಡುವ ಹಾಲು ಎನಿತು ಹಿತವೊ ?
ಹತ್ತು ಜನದ ಮಾತು ಉತ್ತಮವಿಳೆಯಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 564

ಒತ್ತಿಯಿಟ್ಟುಕೊಂಡು, ಮುತ್ತುಗಳ
ಬಳಸಲಾಗದೆಂಥ ಬಲವಂತನಾದರು
ವಿಶ್ವದಾಭಿ ರಾಮ ವೇಮ ತಿಳಿಯೊ 565

ಆ॥ವೆ॥ ತರುಣಿಯ ಮೊಲೆ ಬಿಗಿತವಿರುವುದು ಕೆಲಕಾಲ
ಅರಿಯಲೇನಿದೆ ಬರಿ ಹಾಲತಿತ್ತಿ
ಕಿರುಚಿ ಕಿವುಚಿ ಉಣುತಲಿರುವುದು ಕಿರಿಕೂಸು
ವಿಶ್ವದಾಭಿ ರಾಮ ವೇಮ ತಿಳಿಯೊ 566

ಆ॥ವೆ॥ ತಾಳ್ಮೆಗೆಡದ ಸತಿಯು ತನು ಕೃಶವಾದರು
ಗುಣದ ಹಿರಿಮೆಯಿಂದ ಕೂಡಿಯೊಪ್ಪು
ಹಳೆಯ ಎಮ್ಮೆ ಹಾಲು ಕೋಳೆಯೆನೆ ಬರುವುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ 567

ಆ॥ವೆ॥ ನಿಜವನಾಡುವವನ ನಿಂದೆ ಮಾಳ್ಪುದು ಜಗ,
ನಿಜವನಾಡಬೇಡ ನೀಚನಲ್ಲಿ
ನಿಜವ ನುಡಿಯಬೇಕು, ನಿರ್ಮತ್ಸರಿಕನಲ್ಲಿ,
ವಿಶ್ವದಾಭಿ ರಾಮ ವೇಮ ತಿಳಿಯೊ 568

ಆ॥ವೆ॥ ನಿಜವ ಸುಳ್ಳನೆಲ್ಲ ನೀಲಕಂಠನರಿವ
ನೀರು ತಗ್ಗನರಿಗು ನಿರುತ ಸತ್ಯ
ತಾಯಿ ತಾನರಿವಳು ತನಯನ ಜನ್ಮವ
ವಿಶ್ವದಾಭಿ ರಾಮ ವೇಮ ತಿಳಿಯೊ 569

ಆ॥ವೆ॥ ನೃಪತಿ ಕೃಪೆಯ ನಂಬಿ ನೆಲ ಊಳದಿರುವಂಗೆ,

ಮುಕ್ತಿಯನ್ನು ಪಡೆವ ಭಕ್ತಿ ರಾಜಿಸದೇಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 571

ಆ॥ವೆ॥ ಭೂಮಿಯು ತನದೆನಲು ಭೂಮಾತೆ ನಗುವಳು
ನಗುವುದು ಧನ, ಜಿಪುಣನನ್ನು ಕಂಡು
ಕದನ ಭೀನ ಕಂಡು ಕಾಲನು ನಗುವನು
ವಿಶ್ವದಾಭಿ ರಾಮ ವೇಮ ತಿಳಿಯೊ 572

ಆ॥ವೆ॥ ಪರರಿಗೆ ಸಹಕರಿಸಿ ಪರವಸ್ತು ಪರರಿಗೆ
ಮುದದಿ ಕೊಟ್ಟವನಿಗೆ ಮುಕ್ತಿಯುಂಟು
ಭದ್ರ ಮುಕ್ತಿಗಿಂತ ವಸ್ತು ಪಾವನವೇನು ?
ವಿಶ್ವದಾಭಿ ರಾಮ ವೇಮ ತಿಳಿಯೊ 573

ಆ॥ವೆ॥ ಬರಡು ಹಾಲ್ಕರೆಯಲು ಭಾಂಡೆಯನ್ನೊಯ್ಯಲು
ಹಲ್ಲುದುರೆ ಒದೆವುದು ಹಾಲ ಕೊಡದು
ಲೋಭಿಯನ್ನು ಕೇಳಿ ಲಾಭವು ಇಲ್ಲಯ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 574

ಆ॥ವೆ॥ ಪತಿಯನು ಮನದಲ್ಲಿ ಪರಮಾತ್ಮನೇಯೆಂದು
ಭಾವವಿಡುವ ಸತಿಗೆ ಪರವದುಂಟು
ಪತಿಯ ನಿಂದೆ ಮಾಳ್ಪ ಭಾಮೆಗೆ ದುರ್ಗತಿ
ವಿಶ್ವದಾಭಿ ರಾಮ ವೇಮ ತಿಳಿಯೊ 575

ಆ॥ವೆ॥ ಮಾನ ಧನವ ಬಿಡಳು ಮಹಿಯಲ್ಲಿ ಗುಣವತಿ
ಸತತ ಮಾಡುತಿಹಳು ಪತಿಗೆ ಸೇವೆ

ಒರೆ ಹಿಡಿಯೆ ಹಾವನುದ್ದಯಿವಳು
ತನ್ನಗಾಗದ ಸತಿ ದಾನವಿಯೇ ಸರಿ
ವಿಶ್ವದಾಭಿ ರಾಮ ವೇಮ ತಿಳಿಯೊ 577

ಆ॥ವೆ॥ ಮಾಸಿದ ತಲೆಯಿಂದ ಮೈಲಿಗರಿಪೆಯಿಂದ
ದೇಹ ಹೊಲಸು ಹಿಡಿದು ತಿರುಗುವವನ
ಅಗ್ರ ಕುಲಜನಿರಲಿ ಅತ್ತಿತ್ತ ಕರೆಯರು
ವಿಶ್ವದಾಭಿ ರಾಮ ವೇಮ ತಿಳಿಯೊ 578

ಆ॥ವೆ॥ ಮಿಂಚು ಮಿಂಚಿದಲ್ಲಿ ಮೇಘಕೆ ಬಲುಪುಷ್ಟಿ
ದೊರೆತು ಧಾರೆ ಮಳೆಯು ಸುರಿವುದುಂಟು
ಹೊಳೆದು ಮಿಂಚದಿರಲು ಮಳೆಯು ಬರ್ಪುದು ಸೊನ್ನೆ
ವಿಶ್ವದಾಭಿ ರಾಮ ವೇಮ ತಿಳಿಯೊ 579

ಆ॥ವೆ॥ ಮೇಲು ಜಾತಿ ಶುದ್ಧ ನೀಲ ಒಂದೇ ಸಾಕು
ತಟ್ಟೆ ತುಂಬ ಏಕೆ ತಳುಕು ಕಲ್ಲು
ಚಾಟು ಪದ್ಯವೊಂದು ಸಾಲದೇ ಇಳೆಯಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 580

ಆ॥ವೆ॥ ಚೆಲುವರಾಯ ಗಂಡ, ಒಲಿಮೆ ಬಾಳಿರಲೇನು
ಸಹಜ ಗುಣವ ಬಿಡಳು ಜಾರ ನೀರೆ
ಕುನ್ನಿ ಎಲುವು ನಂಬಿ ಕೂಳನ್ನು ಬಿಟ್ಟಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ 581

ಆ॥ವೆ॥ ವಿದ್ಯೆಯನ್ನು ಕಲಿತು ವಿನಯವಿಲ್ಲದಿರಲು

ಬಡ ಪತಿಯನು ಪ್ರೀತಿ ಪಟ್ಟಿರವಳು
ತಿಪ್ಪೆಯಲ್ಲಿನಕೆರ ತಿನುನಾಯಿಯಿದ್ದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ವೇಷ ಭಾಷೆಯರಿತು ಕಾಷಾಯ ವಸ್ತ್ರವ
ಬಿಗಿದು ಉಡಲು ಮೋಕ್ಷ ಸಿಗುವದುಂಟೆ ?
ತಲೆಯ ಬೋಳಿಸಿದರೆ, ತವಕ ಬೋಳಪ್ಪುದೇ ?
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ವೇದ ಶಾಸ್ತ್ರ ಕಲಿತು ವಿಜ್ಞರು ಆಗಿದ್ದು,
ಬ್ರಹ್ಮ ವಿದ್ಯೆಯನ್ನು ರಾಡಿಗೆಳೆದು,
ಯುವತಿಯನ್ನು ನೆನೆದು, ಯೋಗವ ಬಿಡುವರು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹಳ್ಳಿ ಹಿರಿಯನರಿವ, ಸುಳ್ಳು ಹೇಳುವವನ,
ಸತ್ಯ ಹೇಳುವವನ, ಸಾಂಬನರಿವ,
ತಿಂಡಿ ಪೋತನನ್ನು ಹೆಂಡತಿಯರಿವಳು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ರಮಣಿ ಕೈಕೆಯಿಂದ ರಾಮ ಕಾಡಿನ ಪಾಲು,
ಸೀತೆಯಿಂದ ಲಂಕೆ ಚಿತೆಯ ಪಾಲು
ಕಾಂತೆ ಕೃಷ್ಣೆಯಿಂದ ಕೌರವ ರಣ ಪಾಲು
ವಿಶ್ವದಾಭಿ ರಾಮ ವೇಮ ತಿಳಿಯೊ

ಆ॥ವೆ॥ ಹದವನರಿತ ಮುಗುದೆ, ಅನುವಿಂದ ಮನವಿತ್ತು,

ಕಬ್ಬಿನ ರಸಕಿಂತ, ಕಾಂತೆ ಮಾತೇ ಸಿಹಿ
ವಿಶ್ವದಾಭಿ ರಾಮ ವೇಮ ತಿಳಿಯೊ 589

ವೇ॥ ಕೂಳು ತಿನ್ನದಂತೆ ಕೂತವನಾದರು,
ಕಾಮಿನಿಯರ ಕಂಡು ಕಳವಳಿಸುವ
ಜ್ವಾಲೆಯನ್ನು ಕಂಡ, ಶಲಭ ಕೀಟಕದಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ 590

ವೇ॥ ಹಂದಿ ಮರಿಗಳಿಕ್ಕು ಹದಿನೈದು ಒಮ್ಮೆಗೆ
ಅರಿಯಲಾನೆಯೊಂದೆ ಮರಿಯನಿಕ್ಕು
ಅಂತೆ ಸುಗುಣಿ ಒಬ್ಬನಾದರೆ ಸಾಲನೇ
ವಿಶ್ವದಾಭಿ ರಾಮ ವೇಮ ತಿಳಿಯೊ 591

ವೇ॥ ಹತ್ತು ಜನರ ಮಾತು ಉತ್ತಮವಿಳೆಯಲ್ಲಿ
ಒಬ್ಬನಾಡು ಮಾತು ಒಪ್ಪು ಬರದು
ಉಸಿರದಂತಿರುವವ ಉತ್ತಮನೂರಲ್ಲಿ
ವಿಶ್ವದಾಭಿ ರಾಮ ವೇಮ ತಿಳಿಯೊ 592

ವೇ॥ ಪರಸತಿಯಳ ಸಂಗ ಪ್ರತ್ಯಕ್ಷ ನರಕವು
ಅರಸೆ, ನಿಂದೆಗಳಿಗೆ ನೆರವದಕ್ಕು
ಪುರುಷನರಿತರೆ ಕೊಲೆ, ಅರಸ ಶಿಕ್ಷಿಸುವನು,
ವಿಶ್ವದಾಭಿ ರಾಮ ವೇಮ ತಿಳಿಯೊ 593

ವೇ॥ ಸ್ನಾನವನ್ನು ಮಾಡಿ ದಾನವ ಮಾಡದೆ

ಆ॥ವೆ॥ ಅರಿಯುವವನು ಬೇರೆ, ಅರಿಯನು ತಾನೆಂದು
ದೇಹದ ಅಭಿಮಾನ ಮೋಹ ಕಳೆದು,
ಅರಿತು ಪರಿಣಮಿಸುವ ನರ, ಮುಕ್ತಿ ಪಡೆಯುವ
ವಿಶ್ವದಾಭಿ ರಾಮ ವೇಮ ತಿಳಿಯೊ 595

ಆ॥ವೆ॥ ಜೀವ ಸಂಜ್ಞೆಯಿರುವ ಜೀವದ ತತ್ವವ
ಜೀವಪರ, ಗುರುವಿನ ಸೇರಿಕೊಂಡು
ತನುವು ನಿಲಿಸುವವನೆ ತತ್ವಾರ್ಥ ಗುಣಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 596

ಆ॥ವೆ॥ ಜ್ಞಾನಿಯನ್ನು ಅರಿತು ಮಾಣದೆ ಪೂಜಿಪ
ಮನುಜನಿಹದಿ, ಲೋಕ ಮಾನ್ಯನೆನಿಸಿ,
ಪರದಲಿ ಸುಖಪಡುವ ಪ್ರಾಜ್ಞರಿಚ್ಛಿಸುವಂತೆ
ವಿಶ್ವದಾಭಿ ರಾಮ ವೇಮ ತಿಳಿಯೊ 597

ಆ॥ವೆ॥ ಅಸ್ಥಿರ ತನುವೆಂದು ಅಸ್ಥಿರ ಧನವೆಂದು
ತಿಳಿಸಲರಿತು ತಾನು ತಿಳಿದು ಕೊಂಡು
ಪಾತ್ರನಾದ ಯೋಗಿ ಪರಮಾತ್ಮನೇ ಸರಿ
ವಿಶ್ವದಾಭಿ ರಾಮ ವೇಮ ತಿಳಿಯೊ 598

ಆ॥ವೆ॥ ತತ್ವಗಳಲಿ ದೈವ ತತ್ವವನ್ನು ತಿಳಿದು
ನಿತ್ಯ ಮುಕ್ತ ಮಹಿತ ನಿಲಯದಲ್ಲಿ
ಸಂಚರಿಸುತಿರುವವ ಸಾಕ್ಷಾತ್ತು ಪರಶಿವ
ವಿಶ್ವದಾಭಿ ರಾಮ ವೇಮ ತಿಳಿಯೊ 599

ಆ॥ವೆ॥ ತತ್ವ ತಿಳಿಯುವವನು ದೈವವನ್ನರಿವನು

ಬುದ್ಧಿ ಜಡತೆಯಳಿಸಿ ಸಿದ್ಧನಾದ
ಜ್ಞಾನಿ ಮರ್ಮವರಿತು ಜಗದಲ್ಲಿ ಮೆರೆವನು
ವಿಶ್ವದಾಭಿ ರಾಮ ವೇಮ ತಿಳಿಯೊ 601

ಆ॥ವೆ॥ ತನ್ನನು ಗಮನಿಸಲು ತಾನೆ ಆಜೀವನು
ತತ್ವವರಸೆ ತಾನೆ ತತ್ವವಕ್ಕು
ಮಣ್ಣು ಮುಗಿಲು ಇಲ್ಲ ಮಾಯೆಯು ಏನಿಲ್ಲ
ವಿಶ್ವದಾಭಿ ರಾಮ ವೇಮ ತಿಳಿಯೊ 602

ಆ॥ವೆ॥ ತನ್ನ ತಿಳಿಯುವವನೆ ತತ್ವ ರೂಪಾತ್ಮನು
ತನ್ನ ತಿಳಿಯದವನು ತಾನು ತಾನೆ
ತನ್ನ ಅಂತರದವ ತಾನೆ ತಾನಾಗಿಹ
ವಿಶ್ವದಾಭಿ ರಾಮ ವೇಮ ತಿಳಿಯೊ 603

ಆ॥ವೆ॥ ತಾಯಿ ಗಿರಿಜೆಯೆಂದು ತಂದೆ ಶಂಕರನೆಂದು
ಪ್ರಮಥ ಗಣವೆ ಬಂಧು ವರ್ಗವೆಂದು
ಆತ್ಮದೆಣಿಸುವವನೆ ಅಂಚಿತ ಘನಯೋಗಿ
ವಿಶ್ವದಾಭಿ ರಾಮ ವೇಮ ತಿಳಿಯೊ 604

ಆ॥ವೆ॥ ತಾನು ಇಂದ್ರಿಯಗಳ ದಮದಿಂದ ಜಯಿಸಲು
ತತ್ವ ರೂಪನಾಗಿ ತಾನೆ ಮೆರೆವ
ರಾಜಯೋಗಿಯಿಂತು ರಾಜಿಸುತಿರಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ 605

ಆ॥ವೆ॥ ತಾರುಮಾರುಮಿರದೆ ತತ್ವದರ್ಶನ ಹೊಂದಿ

ತಿರುವು ಬರುವದುಂಟೆ ಅರಿವಿನಲ್ಲಿ
ತಿರುಗದಂಥ ದಾರಿ ತಿರುಗು ನೀ ಸತತವು
ವಿಶ್ವದಾಭಿ ರಾಮ ವೇಮ ತಿಳಿಯೊ 607

ಆ॥ವೆ॥ ನಿಜವು ಅರಿತು ಇದ್ದ ಸುಜನ ತಾನಿಜವನ್ನೆ
ಆಡಬೇಕು ಅನ್ಯವಾಡದಂತೆ
ಮರೆಯು ಮುಚ್ಚದೇಕೆ ? ಮಾತು ತಪ್ಪುವದೇಕೆ ?
ವಿಶ್ವದಾಭಿ ರಾಮ ವೇಮ ತಿಳಿಯೊ 608

ಆ॥ವೆ॥ ನೆನೆಯಲಾಕ್ಷಣದಲಿ ನಿನಗೆ ಸಿಗನು ದೈವ
ಧ್ಯಾನ ನಿರತದಿಂದ ತತ್ವಸಿದ್ಧಿ
ನೆನೆದು ಮನನದಿಂದ ನೆನೆಯುತಲಿರಬೇಕು
ವಿಶ್ವದಾಭಿ ರಾಮ ವೇಮ ತಿಳಿಯೊ 609

## ಫಲಶೃತಿ

ಆ॥ವೆ॥ ಇಹ ಪರಂಗಳಲ್ಲಿ ಇದೆ ಸಾಧನವುಯೆಂದು
ಬರೆದು, ಓದಿ ಕೇಳುತಿರುವವರಿಗೆ
ಮಂಗಳಂಗಳಕ್ಕು ಮಹಿಯಲ್ಲಿ ಇದು ಸತ್ಯ
ವಿಶ್ವದಾಭಿ ರಾಮ ವೇಮ ತಿಳಿಯೊ 610

ಓಂ

ಶಾಂತಿಃ ಶಾಂತಿಃ ಶಾಂತಿಃ

